# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

## ವಿಶೇಷ ರಾಜ್ಯ ಪತ್ರಿಕೆ

| ಭಾಗ – I | ಬೆಂಗಳೂರು, ಬುಧವಾರ, ಮೇ ೨೧, ೨೦೧೪ (ವೈಶಾಖ ೩೧, ಶಕ ವರ್ಷ ೧೯೩೬) | ನಂ. ೩೨೦ |
|---|---|---|
| **Part – I** | **Bangalore, Wednesday, May 21, 2014 (Vaishakha 31, Shaka Varsha 1936)** | **No. 320** |


### ಅಲ್ಪಸಂಖ್ಯಾತರ ಕಲ್ಯಾಣ, ಹಜ್ ಮತ್ತು ವಕ್ಫ್ ಸಚಿವಾಲಯ

**ವಿಷಯ:** ಕರ್ನಾಟಕ ರಾಜ್ಯದ ವಕ್ಫ್ ಮಂಡಳಿಯಲ್ಲಿ ನೋಂದಾಯಿಸಲಾದ ಮಸೀದಿಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಪೇಶ್ ಇಮಾಮ್ ಮತ್ತು ಮೌಜ್ಜನ್ ರವರುಗಳಿಗೆ ಮಾಸಿಕ ಗೌರವಧನ (ಹದಿಯ) ನೀಡುವ ಕುರಿತು.

**ಓದಲಾಗಿದೆ:**

1) ದಿನಾಂಕ: 18–04–2011 ರಂದು ಅಪರ ಮುಖ್ಯ ಕಾರ್ಯದರ್ಶಿ ಮತ್ತು ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿ ನಡೆದ ಅಧಿಕಾರಯುಕ್ತ ಸಮಿತಿ ಸಭೆಯ ನಡುವಳಿ.

2) ಸರ್ಕಾರಿ ಆದೇಶ ಸಂಖ್ಯೆ : ಅಸಂಕಇ 154 ಡಬ್ಲ್ಯೂಇಎಸ್ 2011 (ಭಾಗ), ದಿನಾಂಕ: 28–04–2011.

3) ಮುಖ್ಯಕಾರ್ಯನಿರ್ವಹಣಾಧಿಕಾರಿ, ಕರ್ನಾಟಕ ರಾಜ್ಯ ವಕ್ಫ್ ಮಂಡಳಿ ಇವರ ಪರಿಷ್ಕೃತ ಪ್ರಸ್ತಾವನೆ ಸಂಖ್ಯೆ : KSBW/92/ADM/2005-06, ದಿನಾಂಕ: 08–07–2013.

4) ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ ರವರ ಟಿಪ್ಪಣಿ ಸಂಖ್ಯೆ : ಪಿಡಿ 9 ಐಎಂಎಂ 2013, ದಿನಾಂಕ: 16–09–2013.

5) ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆಯ ಟಿಪ್ಪಣಿ ಸಂಖ್ಯೆ : LAW 606 OPN 2013, ದಿನಾಂಕ: 27–12–2013.

**ಪ್ರಸ್ತಾವನೆ:**

ಭಾರತದ ಸರ್ವೋಚ್ಛ ನ್ಯಾಯಾಲಯದ ರಿಟ್ ಅರ್ಜಿ ಸಂಖ್ಯೆ : 715/1990, ದಿನಾಂಕ: 13–05–1993 ರಲ್ಲಿ ನೀಡಲಾಗಿರುವ ಆದೇಶದಂತೆ, ಮಸೀದಿಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಪೇಶ್ ಇಮಾಮ್ ಹಾಗೂ ಮೌಜ್ಜನ್‌ಗಳಿಗೆ ಗೌರವಧನ ನೀಡುವ ಸಂಬಂಧ ಓದಲಾಗಿರುವ ಕ್ರ.ಸಂ. (1) ರಲ್ಲಿ ಸರ್ಕಾರಿ ಆದೇಶವನ್ನು ಹೊರಡಿಸಲಾಗಿತ್ತು. ಓದಲಾಗಿರುವ ಕ್ರ.ಸಂ (2) ರಲ್ಲಿ ಕರ್ನಾಟಕ ರಾಜ್ಯ ವಕ್ಫ್ ಮಂಡಳಿಯು ಪರಿಷ್ಕೃತ ಪ್ರಸ್ತಾವನೆಯನ್ನು ಸಲ್ಲಿಸಿ, ಅನುಮೋದನೆ ಕೋರಿರುವುದರಿಂದ ಹಿಂದಿನ ಕ್ರ.ಸಂ (1) ರ ದಿನಾಂಕ: 28–04–2011 ರ ಆದೇಶವನ್ನು ಹಿಂಪಡೆದು ಈ ಕೆಳಕಂಡಂತೆ ಪರಿಷ್ಕೃತ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : MWD 98 WES 2013, ಬೆಂಗಳೂರು, ದಿನಾಂಕ: 21–05–2014**

ಪ್ರಸ್ತಾವನೆಯಲ್ಲಿ ನೀಡಲಾಗಿರುವ ವಿವರಣೆಯ ಹಿನ್ನೆಲೆಯಲ್ಲಿ, ರಾಜ್ಯದ ವಕ್ಫ್ ಮಂಡಳಿಯಲ್ಲಿ ನೋಂದಾಯಿಸಲಾದ ಮಸೀದಿಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಪೇಶ್ ಇಮಾಮ್ ಹಾಗೂ ಮೌಜ್ಜನ್‌ಗಳಿಗೆ ಮಾಸಿಕ ಗೌರವಧನ (ಹದಿಯ) ನೀಡಲು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಆದೇಶಿಸಿದೆ.

1) ಈ ಯೋಜನೆಯು ರಾಜ್ಯದ ವಕ್ಫ್ ಮಂಡಳಿಯಲ್ಲಿ ನೋಂದಾಯಿಸಲಾಗಿರುವ ಹಾಗೂ ವಾರ್ಷಿಕ ಆದಾಯ ₹ 1.00 ಲಕ್ಷಕ್ಕಿಂತ ಕಡಿಮೆ ಇರುವ ಮಸೀದಿಗಳಿಗೆ ಮಾತ್ರ ಅನ್ವಯಿಸುವುದು.

2) ವಕ್ಫ್ ಸಂಸ್ಥೆ ತನ್ನದೇ ಆದ ನಿರ್ವಹಣಾ ಯೋಜನೆಯನ್ನು ಕರ್ನಾಟಕ ರಾಜ್ಯ ವಕ್ಫ್ ಮಂಡಳಿಯಿಂದ ಅನುಮೋದನೆ ಪಡೆದಿರಬೇಕು, ಹಾಗಿಲ್ಲದಿದ್ದಲ್ಲಿ ಒಂದು ವರ್ಷದೊಳಗೆ ರಾಜ್ಯ ವಕ್ಫ್ ಮಂಡಳಿಯಿಂದ ತನ್ನ ನಿರ್ವಹಣಾ ಯೋಜನೆಯ ಅನುಮೋದನೆ ಪಡೆಯತಕ್ಕದ್ದು.

3) ವಕ್ಫ್ ಸಂಸ್ಥೆಯ ಆಡಳಿತ ಮಂಡಳಿಯು ನೇಮಕಗೊಂಡಿರುವ ಪೇಶ್ ಇಮಾಮ್ ಹಾಗೂ ಮೌಜ್ಜನ್‌ಗಳಿಗೆ ಗೌರವಧನ (ಹದಿಯ) ನೀಡುವ ಪ್ರಸ್ತಾವನೆಯನ್ನು ನಿಗಧಿತ ನಮೂನೆಯ ಅರ್ಜಿಗಳೊಂದಿಗೆ ತಮ್ಮ ಶಿಫಾರಸ್ಸಿನೊಂದಿಗೆ ವಕ್ಫ್ ಮಂಡಳಿಗೆ ಸಲ್ಲಿಸುವುದು.

4) ಪೇಶ್ ಇಮಾಮ್ ಮತ್ತು ಮೌಜ್ಜನ್‌ಗಳ ಸೇವಾ ವಿಷಯವನ್ನು ಆಯಾ ವಕ್ಫ್ ಸಂಸ್ಥೆಯ ವ್ಯವಸ್ಥಾಪನಾ ಸಮಿತಿಯ ಆಡಳಿತ ಮಂಡಳಿ ನಿರ್ಧರಿಸುವುದು.

5) ಸಂಬಂಧಿಸಿದ ಅರ್ಹ ಸಂಸ್ಥೆಗಳಿಂದ ಹೊಸ ಅರ್ಜಿಗಳನ್ನು ಆಹ್ವಾನಿಸುವುದು.

6) ಜಿಲ್ಲಾ ವಕ್ಫ್ ಸಲಹಾ ಸಮಿತಿಯ ಮುಖಾಂತರ ಈ ಕೆಳಕಂಡ ದಾಖಲಾತಿಗಳೊಂದಿಗೆ ಸಂಸ್ಥೆಯು ಅರ್ಜಿ ಸಲ್ಲಿಸತಕ್ಕದ್ದು.

   1) ಅರ್ಜಿಯೊಂದಿಗೆ ಫಲಾನುಭವಿಯ ಛಾಯಾಚಿತ್ರ.

   2) ಕಳೆದ 3 ವರ್ಷಗಳಲ್ಲಿ ವಾಸವಿರುವ ಬಗ್ಗೆ ದಾಖಲೆ.

   3) ಫಲಾನುಭವಿಯ ಬ್ಯಾಂಕ್ ಖಾತೆಯ ವಿವರಗಳು.

   4) ಈ ಕೆಳಕಂಡಂತೆ ಸಂಸ್ಥೆಯ ವಿವರಗಳು :–

      ➢ ವಕ್ಫ್ ಸಂಸ್ಥೆ ನೋಂದಾಯಿಸಲಾಗಿರುವ ಬಗ್ಗೆ ದಾಖಲೆ.

      ➢ ವಕ್ಫ್ ಸಂಸ್ಥೆಯ ಸಂಪೂರ್ಣ ವಿಳಾಸ

      ➢ ಕಳೆದ ವರ್ಷದ ಸಂಸ್ಥೆಯ ಲೆಕ್ಕಪತ್ರದ ತಖ್ತೆ

      ➢ ಪ್ರಸಕ್ತ ಸಾಲಿನ ಸಂಸ್ಥೆಯ ಆಯವ್ಯಯ

7) ವಕ್ಫ್ ಸಂಸ್ಥೆ ಪೇಶ್ ಇಮಾಮ್ ಮತ್ತು ಮೌಜ್ಜನ್ ರವರ ಮೂರು ತಿಂಗಳ ಕರ್ತವ್ಯದ ಮೇಲೆ ಹಾಜರಾತಿಯಾದ ಬಗ್ಗೆ ದೃಢೀಕರಣ ಪತ್ರವನ್ನು ವಕ್ಫ್ ಮಂಡಳಿಗೆ ಸಲ್ಲಿಸುವುದು.

8) ಸಂಸ್ಥೆಯು ಪೇಶ್ ಇಮಾಮ್ ಮತ್ತು ಮೌಜ್ಜನ್ ರವರು ಸಲ್ಲಿಸಿರುವ ಹಾಜರಾತಿ ವಿವರಗಳುಳ್ಳ ದೃಢೀಕರಣ ಪತ್ರದ ಆಧಾರ, ನೇರವಾಗಿ ಫಲಾನುಭವಿಗಳ ಬ್ಯಾಂಕ್ ಖಾತೆಗೆ ಆನ್‌ಲೈನ್ ಮುಖಾಂತರ ಪ್ರತಿ 3 ತಿಂಗಳಿಗೊಮ್ಮೆ ವಿತರಿಸಿ, ಸಂಬಂಧಪಟ್ಟ ವಕ್ಫ್ ಸಂಸ್ಥೆಗೆ ಸೂಕ್ತ ಮಾಹಿತಿ ನೀಡುವುದು.

9) ನೀಡಲಾಗುವ ಗೌರವಧನ ಸಂಸ್ಥೆ ಆಧಾರಿತವಾಗಿದೆಯೇ ಹೊರತು ವೈಯಕ್ತಿಕ ಆಧಾರಿತವಾಗಿರುವುದಿಲ್ಲ ಹಾಗೂ ಫಲಾನುಭವಿಯ ವೈಯಕ್ತಿಕ ಆದಾಯ ಗಣನೆಗೆ ಬರುವುದಿಲ್ಲ.

10) ಸಂಸ್ಥೆಯು ಪೇಶ್ ಇಮಾಮ್ ಮತ್ತು ಮೌಜ್ಜನ್‌ಗಳು ಬದಲಾಗಿದ್ದಲ್ಲಿ ಹೊಸ ಅರ್ಜಿಯೊಂದಿಗೆ ಪರಿಷ್ಕೃತ ಪ್ರಸ್ತಾವನೆಯನ್ನು ತಕ್ಷಣವೇ ಸಲ್ಲಿಸತಕ್ಕದ್ದು.

11) ಸಂಬಂಧಿಸಿದ ವಕ್ಫ್ ಸಂಸ್ಥೆಗಳ ಆಡಳಿತ ಮಂಡಳಿ ಪ್ರತಿ ಮೂರು ತಿಂಗಳಿಗೊಮ್ಮೆ ಉಪಯೋಗಿತಾ ಹಾಗೂ ಸೇವಾ ಪ್ರಮಾಣ ಪತ್ರವನ್ನು ರಾಜ್ಯ ವಕ್ಫ್ ಮಂಡಳಿಗೆ ಸಲ್ಲಿಸುವುದು.

12) ಪೇಶ್ ಇಮಾಮ್ ಮತ್ತು ಮೌಜ್ಜನ್‌ಗಳಿಂದ ಪಡೆಯುವ ದೂರುಗಳನ್ನು ಆಯಾ ಜಿಲ್ಲೆಗಳ ವಕ್ಫ್ ಸಲಹಾ ಸಮಿತಿಗಳೇ ವಿಲೇ ಮಾಡಲು ಅಧಿಕಾರ ಹೊಂದಿರುತ್ತದೆ.

13) ಸದರಿ ಪೇಶ್ ಇಮಾಮ್ ಮತ್ತು ಮೌಜ್ಜನ್‌ಗಳಿಂದ ಸ್ವೀಕೃತ ಮೇಲ್ಮನವಿಯ ಬಗ್ಗೆ ರಾಜ್ಯ ವಕ್ಫ್ ಮಂಡಳಿಯ ತೀರ್ಮಾನ ಅಂತಿಮವಾಗಿರುವುದು.

14) ಪೇಶ್ ಇಮಾಮ್ ಮತ್ತು ಮೌಜ್ಜನ್‌ಗಳಿಗೆ ಸಂಬಂಧಿಸಿದಂತೆ ವಕ್ಫ್ ಸಂಸ್ಥೆಗಳು ತಮ್ಮದೇ ಆದ ಆದಾಯಗಳಿಂದ ವೇತನವನ್ನು ಭರಿಸುವ ಶಕ್ತಿ ಹೊಂದುವವರೆಗೆ ಮಾತ್ರ ಈ ಕೆಳಕಂಡಂತೆ ವಕ್ಫ್ ಮಂಡಳಿ ಗೌರವಧನವನ್ನು ನೀಡುವುದು.

| ಕ್ರಸಂ | ಹುದ್ದೆಯ ವಿವರ | ಗೌರವ ಧನ (₹ ಗಳಲ್ಲಿ) | ವೈದ್ಯಕೀಯ ಭತ್ಯೆ (₹ ಗಳಲ್ಲಿ) |
|---|---|---|---|
| 1 | ಪೇಶ್ ಇಮಾಮ್ | 3,000 | 100 |
| 2 | ಮೌಝನ್ | 2,400 | 100 |

ಇದಕ್ಕೆ ತಗಲುವ ವೆಚ್ಚವನ್ನು 2225–03–800–0–07–059–ಇತರೆ ಖರ್ಚುಗಳು ಶೀರ್ಷಿಕೆಯಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಆಇ/101/ವೆಚ್ಚ–3/2014, ದಿನಾಂಕ:27–03–2014 ರಂದು ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಈ ಆದೇಶ ದಿನಾಂಕ: 01–04–2014 ರಿಂದ ಜಾರಿಗೆ ಬರುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಅಬ್ಬಾಸ್ ಷರೀಫ್**
ಸರ್ಕಾರದ ಅಧೀನ ಕಾರ್ಯದರ್ಶಿ
ಅಲ್ಪಸಂಖ್ಯಾತರ ಕಲ್ಯಾಣ, ಹಜ್ ಮತ್ತು ವಕ್ಫ್ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ



| ಭಾಗ – I | ಬೆಂಗಳೂರು, ಸೋಮವಾರ, ಮೇ ೨೬, ೨೦೧೪ (ಜೇಷ್ಠ ೫, ಶಕ ವರ್ಷ ೧೯೩೬) | ನಂ. ೩೩೩ |
|---|---|---|
| Part – I | Bangalore, Monday, May 26, 2014 (Jyeishta 5, Shaka Varsha 1936) | No. 333 |



## ಶಿಕ್ಷಣ ಸಚಿವಾಲಯ

**ವಿಷಯ:** 2014–15ನೇ ಸಾಲಿನ ತಾಂತ್ರಿಕ ಕೋರ್ಸುಗಳ (ಇಂಜಿನಿಯರಿಂಗ್ ಪದವಿ/ಡಿಪ್ಲೋಮೊ) ಪ್ರವೇಶಾತಿಗೆ ಬೋಧನಾ ಶುಲ್ಕದ ವಿನಾಯಿತಿ ಯೋಜನೆ **(Tuition Fee Waiver Scheme) (Supernumerary Quota)** ಯಡಿ ಆದಾಯ ಮಿತಿಯನ್ನು ನಿಗಧಿಪಡಿಸುವ ಬಗ್ಗೆ–

**ಓದಲಾಗಿದೆ:**

1) ದಿನಾಂಕ :26–02–2014 ರಂದು ಕರ್ನಾಟಕ ಪರೀಕ್ಷಾ ಪ್ರಾಧಿಕಾರದ ಆಡಳಿತ ಮಂಡಳಿಯ ಸಭೆಯಲ್ಲಿ ತೆಗೆದುಕೊಂಡ ತೀರ್ಮಾನಗಳು

2) ಸರ್ಕಾರದ ಆದೇಶ ಸಂಖ್ಯೆ: ಇಡಿ 21 ಟಿಇಸಿ 2013, ದಿನಾಂಕ:09–07–2013.

**ಪ್ರಸ್ತಾವನೆ:**

ಬಡ ಪ್ರತಿಭಾನ್ವಿತ ವಿದ್ಯಾರ್ಥಿಗಳಿಗೆ ತಾಂತ್ರಿಕ ಕೋರ್ಸುಗಳ (ಇಂಜಿನಿಯರಿಂಗ್ ಪದವಿ/ಡಿಪ್ಲೋಮೊ) ಪ್ರವೇಶಾತಿಗೆ ಅನುಕೂಲ ಕಲ್ಪಿಸುವ ನಿಟ್ಟಿನಲ್ಲಿ ಪೋಷಕರ ವಾರ್ಷಿಕ ಆದಾಯ ರೂ.2.50 ಲಕ್ಷಕ್ಕಿಂತ ಕಡಿಮೆಯಿರುವ ವಿದ್ಯಾರ್ಥಿಗಳಿಗೆ ಪ್ರತಿ ಕೋರ್ಸುಗಳ ಒಟ್ಟು ಪ್ರವೇಶ ಮಿತಿಯ ಮೇಲೆ ಶೇ.5 ರಷ್ಟು ಸಂಖ್ಯಾಧಿಕ ಸೀಟುಗಳನ್ನು **(Supernumerary Seats)** ಬೋಧನಾ ಶುಲ್ಕದ ವಿನಾಯಿತಿ ಯೋಜನೆ **(Tuition Fee Waiver Scheme)** ಯಡಿ ಹಂಚಿಕೆ ಮಾಡುವ ಯೋಜನೆಯನ್ನು ಎಐಸಿಟಿಇ ಯು 2011–12ನೇ ಸಾಲಿನಲ್ಲಿ ಜಾರಿಗೆ ತಂದಿರುವುದಾಗಿದೆ. ಅದರಂತೆ ಸದರಿ ಯೋಜನೆಯನ್ನು ರಾಜ್ಯದಲ್ಲಿ ಅಳವಡಿಸಿ ಮುಂದುವರೆಸಿಕೊಂಡು ಬರಲಾಗಿದೆ. ಸದರಿ ಯೋಜನೆಯಡಿಲ್ಲಿನ ಪೋಷಕರ ವಾರ್ಷಿಕ ಆದಾಯ ಮಿತಿಯನ್ನು ಎಐಸಿಟಿಇ ಮಾರ್ಗಸೂಚಿಯನ್ವಯ ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ 2013–14ನೇ ಸಾಲಿಗೆ ರೂ.4.50 ಲಕ್ಷಕ್ಕೆ ಮಿತಿಗೊಳಿಸಲಾಗಿರುತ್ತದೆ.

ಸದರಿ ವಾರ್ಷಿಕ ಆದಾಯ ಮಿತಿಯನ್ನು ಎಐಸಿಟಿಇ ಯು ರೂ.2.50 ಲಕ್ಷಗಳಿಂದ ರೂ.6.00 ಲಕ್ಷಗಳವರೆಗೆ ಹೆಚ್ಚಿಸಿದ್ದು, ರೂ.6.00 ಲಕ್ಷಗಳ ಆದಾಯ ಮಿತಿಯೊಳಗೆ ಬರುವ ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚು ಇರುವುದರಿಂದ, ಪೋಷಕರ ವಾರ್ಷಿಕ ಆದಾಯ ರೂ.2.50 ಲಕ್ಷಗಳಿಗಿಂತ ಕಡಿಮೆಯಿರುವ ಬಡ ಪ್ರತಿಭಾನ್ವಿತ ಅಭ್ಯರ್ಥಿಗಳಿಗೆ ಈ ಯೋಜನೆಯಡಿಯಲ್ಲಿ ಸೀಟುಗಳು ಸಿಗುವುದು ತೀರಾ ಕಡಿಮೆಯಿರುತ್ತದೆ. ಪ್ರಸ್ತುತ ರಾಜ್ಯದ ಪ್ರತಿಭಾನ್ವಿತ ಬಡ ವಿದ್ಯಾರ್ಥಿಗಳಿಗೆ ತಾಂತ್ರಿಕ ಕೋರ್ಸುಗಳ (ಇಂಜಿನಿಯರಿಂಗ್ ಪದವಿ/ಡಿಪ್ಲೋಮೊ) ಪ್ರವೇಶಾತಿಗೆ ಅನುಕೂಲ ಕಲ್ಪಿಸುವ ನಿಟ್ಟಿನಲ್ಲಿ ಪೋಷಕರ ವಾರ್ಷಿಕ ಆದಾಯ ಮಿತಿಯನ್ನು ಪರಿಷ್ಕರಿಸಿ ಮರುನಿಗಧಿಪಡಿಸುವ ಕುರಿತು ದಿನಾಂಕ:26–02–2014 ರಂದು ನಡೆದ ಕರ್ನಾಟಕ ಪರೀಕ್ಷಾ ಪ್ರಾಧಿಕಾರದ 17ನೇ ಆಡಳಿತ ಮಂಡಳಿಯ ಸಭೆಯಲ್ಲಿ ಚರ್ಚಿಸಿ 2014–15ನೇ ಸಾಲಿನ ತಾಂತ್ರಿಕ ಕೋರ್ಸುಗಳ ಪ್ರವೇಶಾತಿಗೆ ಬೋಧನಾ ಶುಲ್ಕದ ವಿನಾಯಿತಿ ಯೋಜನೆ **(Tuition Fee Waiver Scheme)** ಯಡಿಯಲ್ಲಿ ಸಂಖ್ಯಾಧಿಕ ಸೀಟುಗಳನ್ನು ಮೆರಿಟ್ ಆಧಾರದ ಮೇರೆಗೆ ಹಂಚಿಕೆ ಮಾಡುವ ಸಲುವಾಗಿ ಆದಾಯ ಮಿತಿಯನ್ನು

ನಿಗಧಿಪಡಿಸುವ ಬಗ್ಗೆ ಮೇಲೆ ಕ್ರಸಂ. (1) ರಲ್ಲಿ ಓದಲಾದ ಸಭಾ ನಡವಳಿಗಳಲ್ಲಿ ತೆಗೆದುಕೊಳ್ಳಲಾದ ತೀರ್ಮಾನಗಳನ್ವಯ ಪರಿಶೀಲಿಸಿ ಆದಾಯ ಮಿತಿಯನ್ನು ಪರಿಷ್ಕರಿಸಲು ಉದ್ದೇಶಿಸಿದೆ.

ಅದರಂತೆ, ಈ ಕೆಳಕಂಡ ಆದೇಶ

**ಸರ್ಕಾರಿ ಆದೇಶ ಸಂಖ್ಯೆ: ಇಡಿ 72 ಟಿಇಸಿ 2013, ಬೆಂಗಳೂರು, ದಿನಾಂಕ: 23ನೇ ಮೇ 2014**

ಪ್ರಸ್ತಾವನೆಯಲ್ಲಿ ವಿವರಿಸಲಾದ ಹಿನ್ನೆಲೆಯಲ್ಲಿ ಎಐಸಿಟಿಇ ಯ ಮಾರ್ಗಸೂಚಿಗಳನ್ವಯ ರಾಜ್ಯದ ಬಡ ಪ್ರತಿಭಾನ್ವಿತ ವಿದ್ಯಾರ್ಥಿಗಳಿಗೆ ತಾಂತ್ರಿಕ ಕೋರ್ಸುಗಳ (ಇಂಜಿನಿಯರಿಂಗ್ ಪದವಿ/ಡಿಪ್ಲೋಮೊ) ಪ್ರವೇಶಾತಿಗೆ ಅನುಕೂಲ ಕಲ್ಪಿಸುವ ನಿಟ್ಟಿನಲ್ಲಿ 2014–15ನೇ ಸಾಲಿಗೆ, ಒಟ್ಟು ವಿದ್ಯಾರ್ಥಿ ಪ್ರಮಾಣದ ಶೇ.5 ರಷ್ಟು ಸಂಖ್ಯಾಧಿಕ ಸೀಟುಗಳನ್ನು ಮೆರಿಟ್ ಆಧಾರದ ಮೇರೆಗೆ ಬೋಧನಾ ಶುಲ್ಕದ ವಿನಾಯಿತಿ ಯೋಜನೆ **(Tuition Fee Waiver Scheme)** ಯಡಿಯಲ್ಲಿ ಸೀಟುಗಳನ್ನು ಹಂಚಿಕೆ ಮಾಡಲು ರಾಜ್ಯ ಸರ್ಕಾರವು ಪೋಷಕರ ಆದಾಯ ಮಿತಿಯನ್ನು ಪರಿಷ್ಕರಿಸಿ ಈ ಕೆಳಕಂಡಂತೆ ಮರುನಿಗಧಿಪಡಿಸಿ ಆದೇಶಿಸಿದೆ.

| | |
|---|---|
| ಮೊದಲನೇ ವರ್ಗ | ಬೋಧನಾ ಶುಲ್ಕ ವಿನಾಯಿತಿ ಯೋಜನೆ **(Supernumerary Quota)** ಯಡಿ ಪತ್ಯೇಕವಾಗಿ ಅರ್ಹತಾ ಪಟ್ಟಿ ತಯಾರು ಮಾಡಿಕೊಂಡು ಮೊದಲಿಗೆ ವಾರ್ಷಿಕ ಆದಾಯ ರೂ.1.00 ಲಕ್ಷಕ್ಕೆ ಮೀರದ ಪೋಷಕರ ಅಭ್ಯರ್ಥಿಗಳಿಗೆ ಸೀಟು ಹಂಚಿಕೆ ಮಾಡುವುದು. |
| 2ನೇ ವರ್ಗ | ಮೊದಲನೇ ವರ್ಗದಡಿಯಲ್ಲಿ ಸೀಟು ಹಂಚಿಕೆ ಮುಕ್ತಾಯವಾದ ನಂತರ ಉಳಿಯುವ ಸೀಟುಗಳನ್ನು ವಾರ್ಷಿಕ ಆದಾಯ ರೂ.1.00 ಲಕ್ಷದಿಂದ ರೂ.2.00 ಲಕ್ಷದವರೆಗಿನ ಪೋಷಕರ ಅಭ್ಯರ್ಥಿಗಳಿಗೆ ಸೀಟು ಹಂಚಿಕೆ ಮಾಡುವುದು. |
| 3ನೇ ವರ್ಗ | 2ನೇ ವರ್ಗದಡಿಯಲ್ಲಿ ಸೀಟು ಹಂಚಿಕೆ ಮುಕ್ತಾಯವಾದ ನಂತರ ಉಳಿಯುವ ಸೀಟುಗಳನ್ನು ವಾರ್ಷಿಕ ಆದಾಯ ರೂ.2.00 ಲಕ್ಷದಿಂದ ರೂ.3.00 ಲಕ್ಷದವರೆಗಿನ ಪೋಷಕರ ಅಭ್ಯರ್ಥಿಗಳಿಗೆ ಸೀಟು ಹಂಚಿಕೆ ಮಾಡುವುದು. |
| 4ನೇ ವರ್ಗ | 3ನೇ ವರ್ಗದಡಿಯಲ್ಲಿ ಸೀಟು ಹಂಚಿಕೆ ಮುಕ್ತಾಯವಾದ ನಂತರ ಉಳಿಯುವ ಸೀಟುಗಳನ್ನು ವಾರ್ಷಿಕ ಆದಾಯ ರೂ.3.00 ಲಕ್ಷದಿಂದ ರೂ.4.50 ಲಕ್ಷದವರೆಗಿನ ಪೋಷಕರ ಅಭ್ಯರ್ಥಿಗಳಿಗೆ ಸೀಟು ಹಂಚಿಕೆ ಮಾಡುವುದು. |
| 5ನೇ ವರ್ಗ | 4ನೇ ವರ್ಗದಡಿಯಲ್ಲಿ ಸೀಟು ಹಂಚಿಕೆ ಮುಕ್ತಾಯವಾದ ನಂತರ ಉಳಿಯುವ ಸೀಟುಗಳನ್ನು ವಾರ್ಷಿಕ ಆದಾಯ ರೂ.4.50 ಲಕ್ಷದಿಂದ ರೂ.6.00 ಲಕ್ಷದವರೆಗಿನ ಪೋಷಕರ ಅಭ್ಯರ್ಥಿಗಳಿಗೆ ಸೀಟು ಹಂಚಿಕೆ ಮಾಡುವುದು. |

**ನಿಬಂಧನೆಗಳು:**

1. ಎಲ್ಲಾ ಸರ್ಕಾರಿ / ವಿಶ್ವವಿದ್ಯಾಲಯ / ಅನುದಾನಿತ / ಖಾಸಗಿ ಅನುದಾನರಹಿತ (ಅಲ್ಪಸಂಖ್ಯಾತ ಹಾಗೂ ಅಲ್ಪಸಂಖ್ಯಾತವಲ್ಲದ) ಇಂಜಿನಿಯರಿಂಗ್ ಕಾಲೇಜು/ಪಾಲಿಟೆಕ್ನಿಕ್‌ಗಳಲ್ಲಿ ಎಐಸಿಟಿಇಯು ನಿಗದಿಪಡಿಸಬಹುದಾದ ಪ್ರತಿ ಕೋರ್ಸುಗಳ ಒಟ್ಟು ಪ್ರವೇಶ ಮಿತಿಯ ಮೇಲೆ ಶೇ. 5ರಷ್ಟು ಸಂಖ್ಯಾಧಿಕ ಸೀಟುಗಳನ್ನು (supernumerary seats) ಬೋಧನಾ ಶುಲ್ಕವಿಲ್ಲದೆ **(Tuition fee waiver schemes)** ಪ್ರತಿಭಾನ್ವಿತ ಬಡ ವಿದ್ಯಾರ್ಥಿಗಳ ಪೋಷಕರ ವಾರ್ಷಿಕ ಆದಾಯವು ಮೇಲಿನ ಕೋಷ್ಟಕದ ಮಿತಿಯೊಳಗಿರುವ ಫಲಾನುಭವಿಗಳಿಗೆ ಮೆರಿಟ್ ಆಧಾರದ ಮೇಲೆ ಸೀಟನ್ನು ಹಂಚಿಕೆ ಮಾಡಲಾಗುವುದು.
2. ರಾಜ್ಯ ಸರ್ಕಾರವು ನಿಗದಿಪಡಿಸಿರುವ ಬೋಧನಾ ಶುಲ್ಕವನ್ನು ಈ ಫಲಾನುಭವಿಯು ಭರಿಸತಕ್ಕದ್ದಲ್ಲ. ಆದರೆ ಸದರಿ ಅಭ್ಯರ್ಥಿಯು ವಿಶ್ವವಿದ್ಯಾಲಯ ಶುಲ್ಕವನ್ನು ಮಾತ್ರ ಕರ್ನಾಟಕ ಪರೀಕ್ಷಾ ಪ್ರಾಧಿಕಾರಕ್ಕೆ ಪಾವತಿಸತಕ್ಕದ್ದು.
3. ಎಐಸಿಟಿಇ ಯ ಈ ಯೋಜನೆಯು ಎಲ್ಲಾ ಶಿಕ್ಷಣ ಸಂಸ್ಥೆಗಳಲ್ಲಿನ ಪ್ರತಿ ಕೋರ್ಸುಗಳಲ್ಲೂ ಶೇ.5ರಷ್ಟು ಸಂಖ್ಯಾಧಿಕ ಸೀಟುಗಳ ಹಂಚಿಕೆಯನ್ನು ಕರ್ನಾಟಕ ಪರೀಕ್ಷಾ ಪ್ರಾಧಿಕಾರದ ಸಾಮಾನ್ಯ ಪ್ರವೇಶ ಪರೀಕ್ಷೆಯಲ್ಲಿ ಅರ್ಹರಾದವರಿಂದ ಪ್ರತ್ಯೇಕ ಮೆರಿಟ್ ಲಿಸ್ಟ್ ತಯಾರಿಸಿ ಅದರ ಆಧಾರದ ಮೇಲೆ ಮಾತ್ರ ಭರ್ತಿ ಮಾಡತಕ್ಕದ್ದು.
4. ಈ ಸೀಟುಗಳನ್ನು ಅರ್ಹ ಅಭ್ಯರ್ಥಿಗಳಿಗೆ ಅವರು ಸಾಮಾನ್ಯ ಪ್ರವೇಶ ಪರೀಕ್ಷೆಯಲ್ಲಿ ಪಡೆದ ರ್‍ಯಾಂಕ್ ಆಧಾರದ ಮೇಲೆ ಹಂಚಿಕೆ ಮಾಡಲು ಕರ್ನಾಟಕ ಪರೀಕ್ಷಾ ಪ್ರಾಧಿಕಾರಕ್ಕೆ ಅಧಿಕಾರ ನೀಡಲಾಗಿದೆ.
5. ಸಂಖ್ಯಾಧಿಕ ಸೀಟುಗಳಿಗೆ **(supernumerary seats)** ವಿದ್ಯಾರ್ಥಿಗಳ ಲಭ್ಯತೆ ಇಲ್ಲದಿದ್ದಲ್ಲಿ ಅದನ್ನು ಕಾಮೆಡ್–ಕೆ ಅಥವಾ ಆಡಳಿತ ಮಂಡಳಿ ಕೋಟಾ ಸೀಟುಗಳಾಗಿ ಪರಿವರ್ತಿಸತಕ್ಕದ್ದಲ್ಲ ಹಾಗೂ ಈ ಸಂಖ್ಯಾಧಿಕ ಸೀಟುಗಳನ್ನು 2ನೇ ವರ್ಷದ ಲ್ಯಾಟರಲ್ ಎಂಟ್ರಿಗೂ ಪರಿಗಣಿಸತಕ್ಕದ್ದಲ್ಲ.
6. ಸಂಖ್ಯಾಧಿಕ ಸೀಟುಗಳನ್ನು ಪಡೆದು ಕಾರಣಾಂತರಗಳಿಂದ ಪ್ರವೇಶ ಪಡೆಯದಿದ್ದಲ್ಲಿ, ಅಂತಹ ಸೀಟುಗಳು ಖಾಲಿಯಾಗಿಯೇ ಉಳಿಯತಕ್ಕದ್ದು.
7. ಈ ವರ್ಗದಡಿ ಪ್ರವೇಶ ಪಡೆದ ವಿದ್ಯಾರ್ಥಿಗಳ ವಿವರಗಳನ್ನೊಳಗೊಂಡ ಪಟ್ಟಿಯನ್ನು ಸಂಬಂಧಪಟ್ಟ ಶಿಕ್ಷಣ ಸಂಸ್ಥೆಗಳಿಗೆ ಮತ್ತು ತಾಂತ್ರಿಕ ಶಿಕ್ಷಣ ನಿರ್ದೇಶಕರಿಗೆ ಕರ್ನಾಟಕ ಪರೀಕ್ಷಾ ಪ್ರಾಧಿಕಾರವು ನೀಡತಕ್ಕದ್ದು.

8. ಈ ವರ್ಗದಡಿ ಪ್ರವೇಶಾತಿ ಪಡೆದ ವಿದ್ಯಾರ್ಥಿಗಳಿಗೆ ಯಾವುದೇ ಕಾರಣದಿಂದ ಶಿಕ್ಷಣ ಸಂಸ್ಥೆಗಳು / ಕೋರ್ಸುಗಳ ಬದಲಾವಣೆಗೆ ಅವಕಾಶ ಇರತಕ್ಕದ್ದಲ್ಲ.

9. ಈ ವರ್ಗದಡಿ ಪ್ರವೇಶ ಪಡೆದ ವಿದ್ಯಾರ್ಥಿಗಳ ಮಾಹಿತಿಯನ್ನು ಶಿಕ್ಷಣ ಸಂಸ್ಥೆಗಳ ಅಂತರಜಾಲದಲ್ಲಿ ಪ್ರಕಟಿಸತಕ್ಕದ್ದು.

# ELECTION COMMISSION OF INDIA

Nirvachan Sadan, Ashoka Road, New Delhi - 110001.

Dated : 27th May, 2014
Jyaishtha 6, 1936 (Saka)

## NOTIFICATION

No.322/KT-LC/2014 :- WHEREAS, the Governor of the State of Karnataka has, by notification issued under section 16 of the Representation of the People Act, 1951 (43 of 1951) and published in the official Gazette of the State on 27th May, 2014, been pleased to call upon each of the Council Constituencies, specified in column (1) of the Table below, to elect the number of members specified against that Constituency in column (2) of the said Table, to the Legislative Council of the State of Karnataka.

**TABLE**

| Name of Constituency | No. of members to be elected |
|---|---|
| (1) | (2) |
| Karnataka South-East Graduates' | 1 |
| Karnataka West Graduates' | 1 |
| Karnataka North-East Teachers' | 1 |
| Bangalore Teachers' | 1 |

NOW, THEREFORE, in pursuance of sections 30 and 56 of the Representation of the People Act, 1951 (43 of 1951), the Election Commission of India hereby –

(A) appoints, with respect to the said election in each of the constituencies, -

(a) the 3rd June, 2014 (Tuesday), as the last date for making nominations;

(b) the 4th June, 2014 (Wednesday), as the date for the scrutiny of nominations;

(c) the 6th June, 2014 (Friday), as the last date for the withdrawal of candidatures;

(d) the 20th June, 2014 (Friday), as the date on which a poll shall, if necessary, be taken; and

(e) the 28th June, 2014 (Saturday), as the date before which the election shall be completed; and

(B) fixes the hours from 8.00 A.M. to 4.00 P.M., as the hours during which the poll shall, if necessary, be taken on the date specified above for the election.

By order,

(K. AJAYA KUMAR)
Principal Secretary to the
Election Commission of India

# ELECTION COMMISSION OF INDIA

Nirvachan Sadan, Ashoka Road, New Delhi - 110001.

Dated : 27th May, 2014
Jyaishtha 6, 1936 (Saka)

## NOTIFICATION

No.322/KT-LC/2014 :- WHEREAS, the Governor of the State of Karnataka has, by notification issued under section 16 of the Representation of the People Act, 1951 (43 of 1951) and published in the official Gazette of the State on 27th May, 2014, been pleased to call upon each of the Council Constituencies, specified in column (1) of the Table below, to elect the number of members specified against that Constituency in column (2) of the said Table, to the Legislative Council of the State of Karnataka.

**TABLE**

| Name of Constituency | No. of members to be elected |
|---|---|
| (1) | (2) |
| Karnataka South-East Graduates' | 1 |
| Karnataka West Graduates' | 1 |
| Karnataka North-East Teachers' | 1 |
| Bangalore Teachers' | 1 |

NOW, THEREFORE, in pursuance of sections 30 and 56 of the Representation of the People Act, 1951 (43 of 1951), the Election Commission of India hereby –

(A) appoints, with respect to the said election in each of the constituencies, -

(a) the 3th June, 2014 (Tuesday), as the last date for making nominations;

(b) the 4th June, 2014 (Wednesday), as the date for the scrutiny of nominations;

(c) the 6th June, 2014 (Friday), as the last date for the withdrawal of candidatures;

(d) the 20th June, 2014 (Friday), as the date on which a poll shall, if necessary, be taken; and

(e) the 28th June, 2014 (Saturday), as the date before which the election shall be completed; and

(B) fixes the hours from 8.00 A.M. to 4.00 P.M., as the hours during which the poll shall, if necessary, be taken on the date specified above for the election.

By order,

(K. AJAYA KUMAR)
Principal Secretary to the
Election Commission of India

# ವಿಶೇಷ ರಾಜ್ಯ ಪತ್ರಿಕೆ

| ಭಾಗ – I | ಬೆಂಗಳೂರು, ಮಂಗಳವಾರ, ಮೇ ೨೭, ೨೦೧೪ (ಜ್ಯೇಷ್ಠ ೬, ಶಕ ವರ್ಷ ೧೯೩೬) | ನಂ. ೩೩೬ |
|---|---|---|
| Part – I | Bangalore, Tuesday, May 27, 2014 (Jyeishta 6, Shaka Varsha 1936) | No. 336 |

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

### ಪರಿಷ್ಕೃತ ಅಧಿಸೂಚನೆ – I

**ಸಂಖ್ಯೆ: ಆನಾಸ 69 ಸಲಫ 2012, ಬೆಂಗಳೂರು, ದಿನಾಂಕ: 23–05–2014**

**ವಿಷಯ:–** ಗ್ರಾಹಕ ಸಂರಕ್ಷಣಾ ಕಾಯ್ದೆ 1986ರಂತೆ ರಾಜ್ಯ ಆಯೋಗ ಹಾಗೂ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಗಳ ಅಧ್ಯಕ್ಷರು ಹಾಗೂ ಸದಸ್ಯರು ಮತ್ತು ಮಹಿಳಾ ಸದಸ್ಯರ ಆಯ್ಕೆಗಾಗಿ ಪ್ರಕಟಿಸಿದ ಪ್ರಕಟಣೆಗಳನ್ನು ರದ್ದುಗೊಳಿಸುವ ಬಗ್ಗೆ.

ಅಧಿಸೂಚನೆ ಸಂಖ್ಯೆ: ಆನಾಸ 69 ಸಲಫ 2012 ದಿನಾಂಕ: 16–5–2014ರಂದು ಹೊರಡಿಸಲಾದ ಅಧಿಸೂಚನೆಯನ್ನು ಈ ಕೆಳಕಂಡಂತೆ ಪರಿಷ್ಕರಿಸಿದೆ:

ರಿಟ್ ಪಿಟಿಷನ್ ಸಂಖ್ಯೆ:50856/2012ರ ಪ್ರಕರಣದಲ್ಲಿ ಸರ್ಕಾರವು ಕಾಲಾವಕಾಶ ಕೋರಿ ಮಧ್ಯಂತರ ಅರ್ಜಿ ಸಂಖ್ಯೆ: 01/2014(ರಿಟ್ ಪಿಟಿಷನ್ ಸಂಖ್ಯೆ:ಜಿಎಂ:–ಪಿಐಎಲ್) ದಾಖಲಿಸಿದ ಹಿನ್ನೆಲೆಯಲ್ಲಿ ಮಾನ್ಯ ಉಚ್ಚ ನ್ಯಾಯಾಲಯವು ದಿನಾಂಕ:29–4–2014ರಂದು ವಿಚಾರಣೆ ನಡೆಸಿ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಗಳ ಅಧ್ಯಕ್ಷರ/ ಹಾಗೂ ಸದಸ್ಯರು ಮತ್ತು ಮಹಿಳಾ ಸದಸ್ಯರ ನೇಮಕಾತಿ ಪ್ರಕ್ರಿಯೆಯನ್ನು ಎರಡು ತಿಂಗಳ ಒಳಗಾಗಿ ಪೂರ್ಣಗೊಳಿಸುವಂತೆ ಆದೇಶಿಸಿದೆ.

ಮಾನ್ಯ ಉಚ್ಚ ನ್ಯಾಯಾಲಯದ ಆದೇಶದನ್ವಯ ಸರ್ಕಾರವು ಗ್ರಾಹಕ ಸಂರಕ್ಷಣಾ ಕಾಯ್ದೆ 1986ರಂತೆ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರದನ್ವಯ ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದ ಸದಸ್ಯರು/ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಅಧ್ಯಕ್ಷರ/ಸದಸ್ಯರು ಮತ್ತು ಮಹಿಳಾ ಸದಸ್ಯರ ಆಯ್ಕೆಗಾಗಿ ಪ್ರಕಟಿಸಿದ ಈ ಕೆಳಕಂಡ ಅಧಿಸೂಚನೆಗಳು ನಿಯಮಾನುಸಾರ ಇಲ್ಲದಿರುವುದರಿಂದ ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

| ಕ್ರಮ ಸಂ. | ಅಧ್ಯಕ್ಷರ ನೇಮಕಾತಿ ಪ್ರಕಟಣೆ ಸಂಖ್ಯೆ ಮತ್ತು ದಿನಾಂಕ | ಹುದ್ದೆ | ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಗಳ ಹೆಸರು |
|---|---|---|---|
| 1 | ಕರಾಆ:ಆಡಳಿತ:05:2011, ದಿ: 20.10.2011, | 04 ಅಧ್ಯಕ್ಷರ ಹುದ್ದೆ | ಕೋಲಾರ, ಬೀದರ್, ಹಾಸನ ಮತ್ತು ಕೊಡಗು |
| 2 | ಕರಾಆ:ಆಡಳಿತ:03:2012, ದಿ: 13.7.2012, | 01 ಅಧ್ಯಕ್ಷರ ಹುದ್ದೆ | ಬೆಂಗಳೂರು ನಗರ 2ನೇ ಹೆಚ್ಚುವರಿ |
| 3 | ಕರಾಆ:ಆಡಳಿತ:35:2013, ದಿ: 6.9.2013 | 01 ಅಧ್ಯಕ್ಷರ ಹುದ್ದೆ | ಉಡುಪಿ ಜಿಲ್ಲೆ |
| 4 | ಕರಾಆ:ಆಡಳಿತ:73:2013, ದಿ: 23.1.2014 | 04 ಅಧ್ಯಕ್ಷರ ಹುದ್ದೆ | ಬೆಂಗಳೂರು ನಗರ, ಬಳ್ಳಾರಿ, ಬೆಳಗಾಂ ಮತ್ತು ದಾವಣಗೆರೆ |
| 5 | ಕರಾಆ:ಆಡಳಿತ:05:2013, ದಿ: 12–3–2013, | 06 ಅಧ್ಯಕ್ಷರ ಹುದ್ದೆ | ಶಿವಮೊಗ್ಗ, ಯಾದಗಿರಿ, ಬಿಜಾಪುರ, ಹಾವೇರಿ, ಮೈಸೂರು ಮತ್ತು ರಾಯಚೂರು. |
| | **ಸದಸ್ಯರ ನೇಮಕಾತಿ ಪ್ರಕಟಣೆ ಸಂಖ್ಯೆ ಮತ್ತು ದಿನಾಂಕ** | | |
| 6 | ಕರಾಆ:ಆಡಳಿತ:03:2012, ದಿ:13.7.2012, | 01 ಸದಸ್ಯರ ಹುದ್ದೆ | ರಾಜ್ಯ ಆಯೋಗದ ಸದಸ್ಯರ ಹುದ್ದೆ. |
| 7 | ಕರಾಆ:ಆಡಳಿತ:03:2012, ದಿ:13.7.2012, | 10 ಸದಸ್ಯರ ಹುದ್ದೆ | ಬೆಂಗಳೂರು ನಗರ 2ನೇ ಹೆಚ್ಚುವರಿ, ಗುಲ್ಬರ್ಗಾ, ಮಂಡ್ಯ, ಉತ್ತರಕನ್ನಡ, ಚಿಕ್ಕಮಗಳೂರು, ಬೆಂಗಳೂರು 4ನೇ ಹೆಚ್ಚುವರಿ, ಕೋಲಾರ, ಬೀದರ್ |
| 8 | ಕರಾಆ:ಆಡಳಿತ:03:2012, ದಿ:4.9.2012, | 03 ಸದಸ್ಯರ ಹುದ್ದೆ | ಬೆಂಗಳೂರು ನಗರ 2ನೇ ಹೆಚ್ಚುವರಿ, ಧಾರವಾಡ ಮತ್ತು ಉಡುಪಿ |
| 9 | ಕರಾಆ:ಆಡಳಿತ:05:2013, ದಿ:12.3.2013 | 10 ಸದಸ್ಯರ ಹುದ್ದೆ | ಬೀದರ್, ಕೋಲಾರ, ಯಾದಗಿರಿ, ದಾವಣಗೆರೆ, ಮೈಸೂರು, ಹಾವೇರಿ, ಶಿವಮೊಗ್ಗ, ಚಿಕ್ಕಮಗಳೂರು ಮತ್ತು ಹಾಸನ |
| 10 | ಕರಾಆ:ಆಡಳಿತ:36:2013, ದಿ:6.9.2013 | 07 ಸದಸ್ಯರ ಹುದ್ದೆ | ಬೆಂಗಳೂರು ನಗರ, ಬೆಂಗಳೂರು 3ನೇ ಹೆಚ್ಚುವರಿ,ಚಾಮರಾಜನಗರ, ಗದಗ, ಕೊಪ್ಪಳ |

| ಕ್ರಮ ಸಂ. | ಅಧ್ಯಕ್ಷರ ನೇಮಕಾತಿ ಪ್ರಕಟಣೆ ಸಂಖ್ಯೆ ಮತ್ತು ದಿನಾಂಕ | ಹುದ್ದೆ | ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಗಳ ಹೆಸರು |
|---|---|---|---|
| 11 | ಕರಾಆ:ಆಡಳಿತ:74:2013, ದಿ: 23.1.2014 | 04 ಸದಸ್ಯರ ಹುದ್ದೆ | ಬಾಗಲಕೋಟೆ, ಚಾಮರಾಜನಗರ ಮತ್ತು ದಕ್ಷಿಣಕನ್ನಡ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಉಪಕಾರ್ಯದರ್ಶಿ
ಆಹಾರ, ನಾಗರೀಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಇಲಾಖೆ

## FOOD, CIVIL SUPPLIES AND CONSUMER AFFAIRS SECRETARIAT

### REVISED NOTIFICATION – I

### No. FCS 69 SLF 2012, Bangalore, Dated: 23-5-2014

**Sub:** Cancellation of Notification for selection of Member to Karnataka State Consumer Dispute Redressal Commission President/Members and Women Members to District Consumer Forums as per Consumer Protection Act, 1986-reg.

Earlier Notification No.FCS 69 SLF 2012, dated: 16-5-2014 is revised as under:

The Hon'ble High Court of Karnataka vide its Oder dated: 29-4-2014, considering the I.A No.1/2014 of Government in W.P.No.50586/2012 has ordered to complete the appointment process of Presidents/Members and Women Members of District Consumer Fora within two months (i.e.30-6-2014).

As per the Order of the Hon'ble High Court and in exercise of power conferred under the Consumer Protection Act 1986, the following Notification for appointment of Member to Karnataka State Consumer Dispute Redressal Commission and Presidents/and Women Members to District Consumer Fora which were are not in accordance with the rules and hence **cancelled with immediate effect**:-

| Sl. No. | Notification No. and date of Presidents selection | Posts | Name of the District Consumer Fora |
|---|---|---|---|
| 1 | ಕರಾಆ:ಆಡಳಿತ:05:2011, ದಿನಾಂಕ:20–10–2011 | 04 Presidents post | Kolar, Bidar, Hassan and Kodagu. |
| 2 | ಕರಾಆ:ಆಡಳಿತ:03:2012, ದಿನಾಂಕ:13–7–2012 | 01 Presidents post | Bangalore Urban 2nd Addditional |
| 3 | ಕರಾಆ:ಆಡಳಿತ:35:2013, ದಿನಾಂಕ: 6–9–2013 | 01 Presidents post | Udupi |
| 4 | ಕರಾಆ:ಆಡಳಿತ:73:2013, ದಿ:23–1–2014 | 04 Presidents post | Bangalore Urban, Bellary, Belgaum and Davanagere. |
| 5 | ಕರಾಆ:ಆಡಳಿತ:05:2013, ದಿ:12–3–2013, | 06 Presidents post | Shimoga, Yadagir, Bijapur, Haveri, Mysore and Raichur. |
| 6 | ಕರಾಆ:ಆಡಳಿತ:03:2012, ದಿ: 13–7–2012. | 01 Member post | Karnataka State Commission |
| 7 | ಕರಾಆ:ಆಡಳಿತ:03:2012, ದಿ: 13–7–2012 | 10 Members post | Bangalore Urban 2nd Addditional, Gulberga, Mandya, UttaraKannada, Chickmagalore, Bangalore Urban 4th Addditional, Kolar and Bidar |
| 8 | ಕರಾಆ:ಆಡಳಿತ:03:2012, ದಿ:4–9–2012 | 03 Members post | Bangalore Urban 2nd Addditional, Dharwad and Udupi. |
| 9 | ಕರಾಆ:ಆಡಳಿತ:05:2013, ದಿ:12–3–2013 | 10 Members post | Bidar, Kolar, Yadagiri, Davanagere, Mysore, Haveri, Shimoga, Chickmagalore and Hassan. |
| 10 | ಕರಾಆ:ಆಡಳಿತ:36:2013, ದಿ: 6–9–2013 | 07 Members post | Bangalore Urban, Bangalore Urban 3rd Addditional, Chamarajanagara, Gadag and Koppal. |
| 11 | ಕರಾಆ:ಆಡಳಿತ:74:2013, ದಿ:23–1–2014 | 04 Members post | Bagalakot, Chamarajanagara and Dakshina Kannada. |

By Order and in the Name of the Governor of Karnataka,

**SURESH B. KRISHNAPPANAVAR**
Deputy Secretary to Government
Food, Civil Supplies and Consumer
Affairs Department

## ಪರಿಷ್ಕೃತ ಅಧಿಸೂಚನೆ – II

**ಸಂಖ್ಯೆ: ಆನಾಸ 69 ಸಲಫ 2012, ಬೆಂಗಳೂರು, ದಿನಾಂಕ: 23–05–2014**

**ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯಲ್ಲಿ ಖಾಲಿ ಇರುವ ಅಧ್ಯಕ್ಷರ/ಸದಸ್ಯರು/ಮಹಿಳಾ ಸದಸ್ಯರುಗಳ ಹಾಗೂ ರಾಜ್ಯ ಆಯೋಗದಲ್ಲಿ ಖಾಲಿ ಇರುವ ಸದಸ್ಯರ ಹುದ್ದೆ ಭರ್ತಿ ಮಾಡಲು ಅರ್ಜಿಗಳನ್ನು ಆಹ್ವಾನಿಸುವ ಬಗ್ಗೆ.**

ಅಧಿಸೂಚನೆ ಸಂಖ್ಯೆ: ಆನಾಸ 69 ಸಲಫ 2012 ದಿನಾಂಕ: 16–5–2014ರಂದು ಹೊರಡಿಸಲಾದ ಅಧಿಸೂಚನೆಯನ್ನು ಈ ಕೆಳಕಂಡಂತೆ ಪರಿಷ್ಕರಿಸಿದೆ:

ಗ್ರಾಹಕ ಸಂರಕ್ಷಣಾ ಕಾಯ್ದೆ 1986ರ ಕಲಂ 9(ಎ)ರನ್ವಯ ರಚಿತವಾಗಿರುವ ಈ ಕೆಳಕಂಡ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಗಳ ಅಧ್ಯಕ್ಷರು/ಸದಸ್ಯರು ಮತ್ತು ಮಹಿಳಾ ಸದಸ್ಯರುಗಳ ಹಾಗೂ 9(ಬಿ)ರನ್ವಯ ರಾಜ್ಯ ಆಯೋಗದ ಸದಸ್ಯರ ಸ್ಥಾನಕ್ಕೆ ಸೂಕ್ತರಾದವರನ್ನು ಆಯ್ಕೆ ಮಾಡುವ ಸಲುವಾಗಿ ನಿಗಧಿತ ಅರ್ಜಿ ನಮೂನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ವಿವರ ಈ ಕೆಳಗಿನಂತಿದೆ:–

| ಕ್ರಮ ಸಂ. | ರಾಜ್ಯ ಆಯೋಗ ಹಾಗೂ ಜಿಲ್ಲಾ ಗ್ರಾಹಕರ ವೇದಿಕೆಯ ಹೆಸರು | ಹುದ್ದೆ | | |
|---|---|---|---|---|
| | | ಪೂರ್ಣಕಾಲಿಕ ಅಧ್ಯಕ್ಷರು | ಪೂರ್ಣಕಾಲಿಕ ಸದಸ್ಯರು | ಪೂರ್ಣಕಾಲಿಕ ಮಹಿಳಾ ಸದಸ್ಯರು |
| 1 | ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬೆಂಗಳೂರು | – | 01 | – |
| 2 | ಬೆಂಗಳೂರು ನಗರ | 01 | 01 | – |
| 3 | ಬೆಂಗಳೂರು ನಗರ 2ನೇ ಹೆಚ್ಚುವರಿ | 01 | 01 | 01 |
| 4 | ಬೆಂಗಳೂರು ನಗರ 3ನೇ ಹೆಚ್ಚುವರಿ | – | 01 | – |
| 5 | ಬೆಂಗಳೂರು ನಗರ 4ನೇ ಹೆಚ್ಚುವರಿ | – | 01 | 01 |
| 6 | ಹಾವೇರಿ | 01 | – | 01 |
| 7 | ಹಾಸನ | 01 | – | 01 |
| | | | ಅರೆಕಾಲಿಕ ಸದಸ್ಯರು | ಅರೆಕಾಲಿಕ ಮಹಿಳಾ ಸದಸ್ಯರು |
| | | | (ಸರ್ಕಾರಿ ಆದೇಶ ಸಂಖ್ಯೆ:ಆನಾಸ 65 ಸಲಫ 2012, ದಿನಾಂಕ:21.2.2014ರ ಮೇರೆಗೆ) | |
| 8 | ಗುಲ್ಬರ್ಗಾ | – | – | 01 |
| 9 | ಮಂಡ್ಯ | – | – | 01 |
| 10 | ಉತ್ತರ ಕನ್ನಡ | – | 01 | 01 |
| 11 | ಚಿಕ್ಕಮಗಳೂರು | – | 01 | 01 |
| 12 | ಬೀದರ್ | 01 | 01 | 01 |
| 13 | ಧಾರವಾಡ | | 01 | – |
| 14 | ಉಡುಪಿ | 01 | – | 01 |
| 15 | ಕೋಲಾರ | 01 | 01 | 01 |
| 16 | ಯಾದಗಿರಿ | 01 | 01 | 01 |
| 17 | ದಾವಣಗೆರೆ | 01 | – | 01 |
| 18 | ಮೈಸೂರು | 01 | 01 | – |
| 19 | ಶಿವಮೊಗ್ಗ | 01 | 01 | – |
| 20 | ಬಾಗಲಕೋಟೆ | – | 01 | 01 |
| 21 | ಚಾಮರಾಜನಗರ, | – | 01 | 01 |
| 22 | ದಕ್ಷಿಣ ಕನ್ನಡ | – | 01 | – |

| | | | | |
|---|---|---|---|---|
| 23 | ಕೊಡಗು | 01 | – | – |
| 24 | ಬಳ್ಳಾರಿ | 01 | – | – |
| 25 | ಬೆಳಗಾಂ | 01 | – | – |
| 26 | ಬಿಜಾಪುರ | 01 | – | – |
| 27 | ರಾಯಚೂರು | 01 | – | – |
| 28 | ಕೊಪ್ಪಳ | – | 01 | 01 |
| 29 | ಗದಗ | – | 01 | 01 |
| | **ಒಟ್ಟು** | **16** | **18** | **17** |

ರಾಜ್ಯ ಆಯೋಗದ ಸದಸ್ಯರ ಸ್ಥಾನಕ್ಕೆ ಸೂಕ್ತರಾದವರನ್ನು ಆಯ್ಕೆ ಮಾಡುವ ಸಲುವಾಗಿ ಗ್ರಾಹಕ ಸಂರಕ್ಷಣಾ ಕಾಯ್ದೆ 1986ರ ಕಲಂ 16(1)(ಬಿ)ರನ್ವಯ ಕನಿಷ್ಠ 10 ವರ್ಷಗಳ ಅವಧಿಯಲ್ಲಿ ಜಿಲ್ಲಾ ಮಟ್ಟದ ನ್ಯಾಯಾಂಗ ಅಥವಾ ಟ್ರಿಬ್ಯುನಲ್‌ಗೆ ಸರಿಸಮಾನವಾದ ನ್ಯಾಯಾಲಯದಲ್ಲಿ ಪೀಠಾಧಿಕಾರಿಗಳು ಅಥವಾ ಜಿಲ್ಲಾ ನ್ಯಾಯಾಧೀಶರಾಗಿ ಕಾರ್ಯನಿರ್ವಹಿಸಿ ಅನುಭವ ಹೊಂದಿರುವವರು ಅರ್ಜಿ ಸಲ್ಲಿಸಲು ಅರ್ಹರಾಗಿರುತ್ತಾರೆ.

ರಾಜ್ಯ ಆಯೋಗದ ಸದಸ್ಯರ ಕಾಲಾವಧಿ ಗ್ರಾಹಕರ ಸಂರಕ್ಷಣಾ ಕಾಯ್ದೆ 1986ರ ಕಲಂ 16(3) ಅನ್ವಯ 5 ವರ್ಷ ಅಥವಾ 67 ವರ್ಷದವರೆಗೆ ಇವೆರಡರಲ್ಲಿ ಯಾವುದು ಮೊದಲೋ.

ಗ್ರಾಹಕ ಸಂರಕ್ಷಣಾ ಕಾಯ್ದೆ 1986ರ ಕಲಂ 10(1ಎ) ರನ್ವಯ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಅಧ್ಯಕ್ಷರ ಹುದ್ದೆಗೆ ಅರ್ಹರಾಗಿರುವಂತಹ ಅಭ್ಯರ್ಥಿಯು ಜಿಲ್ಲಾ ನ್ಯಾಯಾಧೀಶರ ವೃಂದದಲ್ಲಿ ಕಾರ್ಯನಿರ್ವಹಿಸುತ್ತಿರುವ ಅಥವಾ ಕಾರ್ಯನಿರ್ವಹಿಸಿರುವವರು ಅಥವಾ ಜಿಲ್ಲಾ ನ್ಯಾಯಾಧೀಶರ ಆಯ್ಕೆ ಹೊಂದಲು ಅರ್ಹರಾಗಿರಬೇಕು.

ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಅಧ್ಯಕ್ಷರ ಹುದ್ದೆಯು ಜಿಲ್ಲಾ ನ್ಯಾಯಾಧೀಶರ ಸಮಾನಾಂತರ ಹುದ್ದೆಯಾಗಿದ್ದು, ಜಿಲ್ಲಾ ನ್ಯಾಯಾಧೀಶರಿಗೆ ಅನ್ವಯಿಸುವ ಸಂಬಳ ಹಾಗೂ ಇತರೆ ಭತ್ಯೆಗಳ ಬಗ್ಗೆ ಸರ್ಕಾರದಿಂದ ನೇಮಕಾತಿ ನಂತರ ಹೊರಡಿಸುವ ಷರತ್ತು ಮತ್ತು ನಿಬಂಧನೆಗಳಲ್ಲಿ ತಿಳಿಸಲಾಗುವುದು.

ಗ್ರಾಹಕ ಸಂರಕ್ಷಣಾ ಕಾಯ್ದೆ 1986ರ ಕಲಂ 10(1ಬಿ) ರನ್ವಯ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಸದಸ್ಯರ ಹುದ್ದೆಗೆ ಅರ್ಜಿ ಸಲ್ಲಿಸಲು

1) ಅಭ್ಯರ್ಥಿಗೆ ಕನಿಷ್ಠ 35 ವರ್ಷ ವಯಸ್ಸಾಗಿರತಕ್ಕದ್ದು.
2) ಅಭ್ಯರ್ಥಿಯು ಯಾವುದಾದರೂ ಅಂಗೀಕೃತ ವಿಶ್ವವಿದ್ಯಾಲಯದ ಪದವೀದರರು ಆಗಿರಬೇಕು.
3) ಅಭ್ಯರ್ಥಿಯು ನ್ಯಾಯ, ನಿಷ್ಠೆ ಮತ್ತು ಪ್ರಾಮಾಣಿಕತೆಯನ್ನು ಹೊಂದಿರುವುದರಜೊತೆಗೆ ಕಾನೂನು ಹಣಕಾಸು, ವಾಣಿಜ್ಯ, ಲೆಕ್ಕ ಕೈಗಾರಿಕೆ, ಸಾರ್ವಜನಿಕ ವ್ಯವಹಾರಗಳ ಮತ್ತು ಸಾರ್ವಜನಿಕ ಆಡಳಿತ ಈ ಕ್ಷೇತ್ರಗಳಲ್ಲಿ ಕನಿಷ್ಠ 10 ವರ್ಷ ಅನುಭವ ಹೊಂದಿರಬೇಕು.

ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಅಧ್ಯಕ್ಷರು/ಸದಸ್ಯರ/ಮಹಿಳಾ ಸದಸ್ಯರ ಕಾಲಾವಧಿಯು ಗ್ರಾಹಕ ಸಂರಕ್ಷಣಾ ಕಾಯ್ದೆ 1986ರ ಕಲಂ 10(2) ಅನ್ವಯ 5 ವರ್ಷ ಅಥವಾ 65 ವರ್ಷದವರೆಗೆ ಇವೆರಡರಲ್ಲಿ ಯಾವುದು ಮೊದಲೋ.

ಸದಸ್ಯರ ಸಂಬಳ ಹಾಗೂ ಇನ್ನಿತರ ಭತ್ಯೆಗಳು:– ಗ್ರಾಹಕರ ಸಂರಕ್ಷಣಾ ಕಾಯ್ದೆ 1986ರ ಕಲಂ 10(3)ರನ್ವಯ ಅನ್ವಯವಾಗುತ್ತದೆ.

ಸದ್ಯಸರುಗಳಿಗೆ ಸಂದಾಯವಾಗುವಂತಹ ಗೌರವಧನ ಮತ್ತು ಪ್ರಯಾಣ ಭತ್ಯೆ, ಪೂರ್ಣಕಾಲಿಕ/ಅರೆಕಾಲಿಕ ವಿಷಯಕ್ಕೆ ಸಂಬಂಧಿಸಿದಂತೆ ಸರ್ಕಾರದ ಆದೇಶ ಸಂ: ಆನಾಸ 65 ಸಲಫ 2012 ದಿನಾಂಕ: 21.2.2014 ರಲ್ಲಿ ಹೊರಡಿಸಿರುವಂತೆ ಹಾಗೂ ಸರ್ಕಾರದಿಂದ ಕಾಲಕಾಲಕ್ಕೆ ಪರಿಷ್ಕರಿಸಿ ಹೊರಡಿಸುವ ಆದೇಶಗಳು ಅನ್ವಯವಾಗುತ್ತದೆ.

ಮೇಲಿನ ಅರ್ಹತೆಯನ್ನು ಹೊಂದಿರುವಂತಹ ಅಭ್ಯರ್ಥಿಗಳು ನಿಗಧಿತ ಅರ್ಜಿ ನಮೂನೆಯಲ್ಲಿ ಆಯ್ಕೆ ಬಯಸಿರುವ ಹುದ್ದೆ ಹಾಗೂ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಹೆಸರನ್ನು ಸ್ಪಷ್ಟವಾಗಿ ನಮೂದಿಸಿ, ಪೂರ್ಣವಾಗಿ ಭರ್ತಿ ಮಾಡಿರುವ ನಿಗಧಿತ ಅರ್ಜಿ ನಮೂನೆಯನ್ನು ಹಾಗೂ ಅದರೊಂದಿಗೆ ಅಗತ್ಯ ದಾಖಲೆಗಳ ದೃಢೀಕೃತ ಪ್ರತಿಗಳನ್ನು ಹಾಗೂ ನಿಮ್ಮ ಸ್ವಂತ ವಿಳಾಸವಿರುವ ಲಕೋಟೆಯೊಂದಿಗೆ (Self addressed cover) ಲಕೋಟೆಯಲ್ಲಿರಿಸಿ, ಲಕೋಟೆಯ ಮೇಲ್ಭಾಗದಲ್ಲಿಯೂ ಸಹ ಆಯ್ಕೆ ಬಯಸಿರುವ ಆಯೋಗದ ಸದಸ್ಯರ ಮತ್ತು ಜಿಲ್ಲಾ ಅಧ್ಯಕ್ಷರ ಮತ್ತು ಸದಸ್ಯರ ಹುದ್ದೆಗೆ ಪ್ರತ್ಯೇಕವಾಗಿ ಅರ್ಜಿ ಸಲ್ಲಿಸತಕ್ಕದ್ದು. ಹುದ್ದೆ ಹಾಗೂ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಹೆಸರನ್ನು ದಪ್ಪ ಅಕ್ಷರಗಳಲ್ಲಿ ಬರೆದು, **ದಿನಾಂಕ: 31–5–2014ರ ಸಂಜೆ 5–00 ಘಂಟೆಯೊಳಗಾಗಿ ರಿಜಿಸ್ಟ್ರಾರ್ ಮತ್ತು ಆಡಳಿತಾಧಿಕಾರಿ, ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬಸವ ಭವನ, ಬೆಂಗಳೂರು** 560001 ಇಲ್ಲಿಗೆ ತಲುಪುವಂತೆ ಸಲ್ಲಿಸುವುದು.

ನಿಗಧಿತ ದಿನಾಂಕ ಹಾಗೂ ಸಮಯದ ನಂತರ ಬರುವಂತಹ ಯಾವುದೇ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ. ನಿಗಧಿತ ಅರ್ಜಿ ನಮೂನೆಯು ವೆಬ್‌ಸೈಟ್ http://kscdrc.kar.nic.in, http://ahara.kar.nic.in ಹಾಗೂ www.legalmetrology.kar.nic.in ಲಭ್ಯವಿದ್ದು, ಸಂಬಂಧಪಟ್ಟ ಅರ್ಹ ಅಭ್ಯರ್ಥಿಗಳು ವೆಬ್‌ಸೈಟಗಳಿಂದ ಅರ್ಜಿ ನಮೂನೆಯನ್ನು ನೇರವಾಗಿ ಪಡೆದುಕೊಳ್ಳಬಹುದಾಗಿದೆ.

ಅರ್ಜಿದಾರರು ಅವರ ಅರ್ಜಿಯೊಂದಿಗೆ ರೂ.100/– ಭಾರತೀಯ ಪೋಸ್ಟಲ್ ಆರ್ಡರ್/ಡಿ.ಡಿ/ಪೇ ಆರ್ಡರ್ ಅನ್ನು ರಿಜಿಸ್ಟ್ರಾರ್ ಮತ್ತು ಆಡಳಿತಾಧಿಕಾರಿ, ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬಸವ ಭವನ, ಬೆಂಗಳೂರು, ಇವರ ಹೆಸರಿನಲ್ಲಿ ಸಲ್ಲಿಸತಕ್ಕದ್ದು ಹಾಗೂ ಅರ್ಜಿ ನಮೂನೆಯಲ್ಲಿ ಈ ಕುರಿತು ವಿವರವನ್ನು ನಮೂದಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಉಪಕಾರ್ಯದರ್ಶಿ
ಆಹಾರ, ನಾಗರೀಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಇಲಾಖೆ

## REVISED NOTIFICATION – II

### No. FCS 69 SLF 2012, Bangalore, Dated: 23-5-2014

### INVITING APPLICATION FOR THE VACANT POSTS OF RESIDENT:MEMBERS, LADY MEMBERS IN THE DISTRICT FORA AND MEMBER OF STATE COMMISSION IN THE STATE

Earlier Notification No.FCS 69 SLF 2012, dated: 16-5-2014 is revised as under:

District Consumer Dispute Redressal Forum has constituted as per Consumer Protection Act 1986 under Section 9(a) and State Commission has established as per Consumer Protection Act 1986 under Section 9(b) by the State Government. Applications are called for selection of Presidents/Member and Women Members for District Consumer Fora and a member for State Commission. Details of vacant posts are shown in the schedule below:

| **Sl. No.** | **Name of the District Forums and State Commission** | **Posts** | | |
|---|---|---|---|---|
| | | **Full time Presidents** | **Full time Members** | **Full Women Members** |
| 1 | Karnataka State Consumer Dispute Redressal Commission | - | 01 | - |
| 2 | Bangalore Urban | 01 | 01 | - |
| 3 | Bangalore Urban 2nd Additional | 01 | 01 | 01 |
| 4 | Bangalore Urban 3rd Additional | - | 01 | - |
| 5 | Bangalore Urban 4thAdditional | - | 01 | 01 |
| 6 | Haveri | 01 | - | 01 |
| 7 | Hassan | 01 | - | 01 |
| | | | **Part time Members** | **Part time Women Members** |
| | | | **(As per G.O. No.FCS 65 SLF 2012, dt: 21-2-2014)** | |
| 8 | Gulberga | - | - | 01 |
| 9 | Mandya | - | - | 01 |
| 10 | Uttar Kannada | - | 01 | 01 |
| 11 | Chikmagalore | - | 01 | 01 |
| 12 | Bidar | 01 | 01 | 01 |
| 13 | Dharwad | | 01 | - |
| 14 | Udupi | 01 | - | 01 |
| 15 | Kolar | 01 | 01 | 01 |
| 16 | Yadagiri | 01 | 01 | 01 |
| 17 | Davanagere | 01 | - | 01 |
| 18 | Mysore | 01 | 01 | - |
| 19 | Shimoga | 01 | 01 | - |

| | | | | |
|---|---|---|---|---|
| 20 | Bagalkot | - | 01 | 01 |
| 21 | Chamarajanagara | - | 01 | 01 |
| 22 | Dakshina Kannada | - | 01 | - |
| 23 | Kodagu | 01 | - | - |
| 24 | Bellary | 01 | - | - |
| 25 | Belgaum | 01 | - | - |
| 26 | Bijapur | 01 | - | - |
| 27 | Raichur | 01 | - | - |
| 28 | Koppal | - | 01 | 01 |
| 29 | Gadag | - | 01 | 01 |
| | **Total** | **16** | **18** | **17** |

The eligibility for selection of member for State Commission as per Section 16(1)(B) of Consumer Protection Act 1986.

The tenure of member for State Commission as per 16(3) of Consumer Protection Act 1986.

As per Section 10(1)(a) of Consumer Protection Act 1986 the eligible candidate for the post of President of District Consumer Fora who is or has been or is qualified to be a District Judge are eligible.

The post of Presidents is equivalent to the District Judge the salary and other allowances admissible to District Judge will be clarified in terms and conditions by the Government after the appointment.

As per Section 10(1)(b) of Consumer Protection Act 1986 candidate eligible to apply for the post of Members to District Consumer Fora must

i) Be not less than thirty-five years of age,

ii) Possess bachelor's degree from a recognized university,

iii) Be persons of ability, integrity and standing, and have adequate knowledge and experience of at least ten years in dealing with problems relating to economics, law, commerce, accountancy, industry, public affairs or administration;

The tenure of Presidents/Members/lady Members of the District Forum is as per Section 10(2) Consumer Protection Act 1986, for 5 years or 65 years whichever is earlier.

Salary and allowances to the Members /Women Members are admissible as per the 10(3) of Consumer Protection Act 1986.

The Honorarium and Travelling Allowance payable to Members of full/part time is as per Government Order No.FCS 65 SLF 2012,dated: 21-2-2014 and admissible as per orders of the government from time to time.

The eligible candidates shall fill the prescribed application form clearly with the name of the post and District Forum required to be appointed State Commission member post submit application separately, with all the required documents duly certified and with the self addressed envelope and submit to Registrar and Administrative Officer, Karnataka State Consumer Dispute Redressal Commission, Basava Bhavan, Bangalore-1 on or before 31-5-2014 by 5.00 P.M. The cover of the application shall contain the post applied and the name of the District Forums in block letters.

The application will not be received after the due date and time prescribed. The prescribed pro-forma of the applications will be available in the website: http://kscdrc.kar.nic.in, http://ahara.kar.nic.in, and www.legalmetrlogy.kar.nic.in

Applicant can submit with Rs.100/- postal order/ D.D/Pay order in the favor of Registrar and Administrative Officer, Karnataka State Consumer Dispute Redressal Commission, Basava Bhavan, Bangalore-1. The particulars of this should be mentioned in the application.

By Order and in the Name of the Governor of Karnataka,

**SURESH B. KRISHNAPPANAVAR**
Deputy Secretary to Government
Food, Civil Supplies and Consumer
Affairs Department

# ವಿಶೇಷ ರಾಜ್ಯ ಪತ್ರಿಕೆ

| ಭಾಗ – I<br>Part – I | ಬೆಂಗಳೂರು, ಮಂಗಳವಾರ, ಮೇ ೨೭, ೨೦೧೪ (ಜ್ಯೇಷ್ಠ ೬, ಶಕ ವರ್ಷ ೧೯೩೬)<br>Bangalore, Tuesday, May 27, 2014 (Jyeishta 6, Shaka Varsha 1936) | ನಂ. ೩೩೭<br>No. 337 |
|---|---|---|

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** 2014–15 ನೇ ಸಾಲಿನಲ್ಲಿ ಮಾಡುವ ಸರ್ಕಾರಿ ನೌಕರರ ವರ್ಗಾವಣೆಗಳ ಬಗ್ಗೆ ಮಾರ್ಗಸೂಚಿಗಳು.

**ಓದಲಾಗಿದೆ:**

(1) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 22 ಸೇನೌವ 2013 ದಿನಾಂಕ 07.06.2013

(2) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 29 ಸೇನೌವ 2014 ದಿನಾಂಕ 20.05.2014.

(3) ಅಧ್ಯಕ್ಷರು, ಕರ್ನಾಟಕ ರಾಜ್ಯ ಸರಕಾರಿ ನೌಕರರ ಸಂಘ ಇವರ ಪತ್ರ ಸಂಖ್ಯೆ: ಜಿಇಎ 1401/2014–15 ದಿನಾಂಕ 21.05.2014

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ದಿನಾಂಕ 07.06.2013 ರ ಸರ್ಕಾರಿ ಆದೇಶದಲ್ಲಿ ಸರ್ಕಾರಿ ನೌಕರರ ವರ್ಗಾವಣೆ ಕುರಿತಂತೆ ವಿಸ್ತೃತವಾದ ಮಾರ್ಗಸೂಚಿಗಳನ್ನು ನೀಡಲಾಗಿದೆ. 2014–15 ನೇ ಸಾಲಿನಲ್ಲಿ ಮಾಡುವ ಸರ್ಕಾರಿ ನೌಕರರ ವರ್ಗಾವಣೆಗಳ ಬಗ್ಗೆ ಮೇಲೆ (2) ರಲ್ಲಿ ಓದಲಾದ ಆದೇಶದಲ್ಲಿ ಸೂಚನೆಗಳನ್ನು ನೀಡಲಾಗಿದೆ. ಸರ್ಕಾರಿ ನೌಕರರು ಇಲಾಖೆಯ ಕಾರ್ಯಚಟುವಟಿಕೆಯಲ್ಲಿ ಜ್ಞಾನ ಗಳಿಸಿ ಪರಿಣಾಮಕಾರಿಯಾಗಿ ಕೆಲಸ ನಿರ್ವಹಿಸಲು ಅನುಕೂಲವಾಗುವಂತೆ ಅವಧಿಯನ್ನು ನಿಗದಿಪಡಿಸುವಂತೆ ಮತ್ತು ವರ್ಗಾವಣೆ ಪ್ರಮಾಣವನ್ನು ನಿಯಂತ್ರಿಸಲು ವರ್ಗಾವಣೆಯ ಮಿತಿಯನ್ನು ನಿಗದಿಪಡಿಸಿ ಸ್ಪಷ್ಟ ನಿರ್ದೇಶನ ನೀಡುವಂತೆ ಅಧ್ಯಕ್ಷರು, ಕರ್ನಾಟಕ ರಾಜ್ಯ ಸರಕಾರಿ ನೌಕರರ ಸಂಘ ಇವರು ಮೇಲೆ (3) ರಲ್ಲಿ ಓದಲಾದ ಪತ್ರದಲ್ಲಿ ಕೋರಿರುತ್ತಾರೆ. ಈ ಹಿನ್ನೆಲೆಯಲ್ಲಿ, ಸರ್ಕಾರವು ಪ್ರಸ್ತಾವನೆಯನ್ನು ಮರು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 29 ಸೇನೌವ 2014, ಬೆಂಗಳೂರು, ದಿನಾಂಕ: 26.05.2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಮೇಲೆ ಕ್ರಮಾಂಕ (2) ರಲ್ಲಿ ಓದಲಾದ ದಿನಾಂಕ 20.05.2014 ರ ಆದೇಶದ ಕ್ರಮ ಸಂಖ್ಯೆ (2) ಮತು (3) ನ್ನು ಭಾಗಶ:

ಮಾರ್ಪಡಿಸಿ ಈ ಕೆಳಕಂಡಂತೆ ಆದೇಶಿಸಿದೆ:–

(1) 2014–15 ನೇ ಸಾಲಿನಲ್ಲಿ ಮಾಡಲಾಗುವ ಒಟ್ಟು ವರ್ಗಾವಣೆಗಳು ಸಂಬಂಧಿತ ವೃಂದದ ಕಾರ್ಯಕಾರಿ ವೃಂದ ಬಲದ (working strength) ಶೇ.3 ರಷ್ಟನ್ನು ಮೀರಬಾರದು.

(2) ಎಲ್ಲಾ ಗುಂಪು 'ಸಿ' ಹುದ್ದೆಗಳ ವರ್ಗಾವಣೆಗಳಿಗೆ ನಿಗದಿಪಡಿಸಿರುವ ಕನಿಷ್ಠ ಸೇವಾವಧಿ 3 ವರ್ಷಗಳು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ದೇವರಾಜು**
ಸರ್ಕಾರದ ಉಪ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವಾ ನಿಯಮಗಳು–1)

# ವಿಶೇಷ ರಾಜ್ಯ ಪತ್ರಿಕೆ

| ಭಾಗ – I<br>Part – I | ಬೆಂಗಳೂರು, ಶನಿವಾರ, ಮೇ ೩೧, ೨೦೧೪ (ಜ್ಯೇಷ್ಠ ೧೦, ಶಕ ವರ್ಷ ೧೯೩೬)<br>Bangalore, Saturday, May 31, 2014 (Jyeishta 10, Shaka Varsha 1936) | ನಂ. ೩೪೬<br>No. 346 |
|---|---|---|

## ಸಹಕಾರ ಸಚಿವಾಲಯ

**ವಿಷಯ :** 2014–15ನೇ ಸಾಲಿನಿಂದ **ಯಶಸ್ವಿನಿ ಸಹಕಾರಿಗಳ ಆರೋಗ್ಯ ರಕ್ಷಣಾ ಯೋಜನೆಯನ್ನು** ಜಾರಿಗೊಳಿಸಲು ಹಾಗೂ ಸದಸ್ಯರುಗಳನ್ನು ನೋಂದಾಯಿಸಲು ಮಾರ್ಗ ಸೂಚಿಗಳನ್ನು ಬದಲಾಯಿಸಿ (Substitute) ಆದೇಶ ಹೊರಡಿಸುವ ಬಗ್ಗೆ.

**ಉಲ್ಲೇಖ :** ಈ ಕಛೇರಿ ಸಮಸಂಖ್ಯೆ ಸರ್ಕಾರಿ ಆದೇಶ ದಿನಾಂಕ: 26.02.2014

**ಪ್ರಸ್ತಾವನೆ:**

ದಿನಾಂಕ: 27.05.2014ರಂದು ನಗರ ಯಶಸ್ವಿನಿ ಯೋಜನೆಯ ಉಧ್ಘಾಟನಾ ಸಮಾರಂಭದಂದು ಮಾನ್ಯ ಮುಖ್ಯಮಂತ್ರಿಯವರನ್ನು ಸಹಕಾರ ಸಂಘಗಳ ಹಿರಿಯ ಸದಸ್ಯರುಗಳು ಉಲ್ಲೇಖ (1) ರ ಆದೇಶದಲ್ಲಿ ನಿಗದಿಪಡಿಸಿರುವ 75 ವರ್ಷಗಳ ವಯೋಮಿತಿಯನ್ನು ಸಡಿಲಿಸಬೇಕೆಂದು ಮನವಿ ಮಾಡಿಕೊಂಡ ಮೇರೆಗೆ ಮಾನ್ಯ ಮುಖ್ಯಮಂತ್ರಿಯವರು ಯಶಸ್ವಿನಿ ಯೋಜನೆಯಡಿ 75 ವರ್ಷಗಳ ವಯೋಮಿತಿಯನ್ನು ಸಡಿಲಿಸಿ ಜೀವಿತಾವಧಿಯವರೆಗೆ ಪ್ರಯೋಜನ ಸಿಗುವಂತೆ ಮಾಡಲು ಆದೇಶಿಸಿದ ಹಿನ್ನೆಲೆಯಲ್ಲಿ ಮಾರ್ಗಸೂಚಿ [9,10]ನ್ನು ಬದಲಾಯಿಸುವ ಅಗತ್ಯವಿರುತ್ತದೆ. ಲೋಕಸಭಾ ಚುನಾವಣೆಯ

ಕಾರಣದಿಂದ ಈ ವರೆಗಿನ ಸದಸ್ಯರ ನೋಂದಾವಣೆ ಕಡಿಮೆಯಿರುವುದರಿಂದ ಹೆಚ್ಚಿನ ಪ್ರಗತಿ ಸಾಧಿಸಲು ಅನುವಾಗುವಂತೆ 14[ಅ] ನ್ನು ಸಹ ಬದಲಾಯಿಸುವ (Substitute) ಅಗತ್ಯತೆ ಇರುವುದರಿಂದ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಒ/101/ಸಿಎಲ್ಎಸ್/2014, ಬೆಂಗಳೂರು ದಿನಾಂಕ: 30.05.2014**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನಲೆಯಲ್ಲಿ ಯಶಸ್ವಿನಿ ಸಹಕಾರಿಗಳ ಆರೋಗ್ಯ ರಕ್ಷಣಾ ಯೋಜನೆಯಡಿಯಲ್ಲಿ ಹೊರಡಿಸಿರುವ ಸರ್ಕಾರದ ಆದೇಶದಲ್ಲಿನ ಮಾರ್ಗಸೂಚಿ ಸಂಖ್ಯೆ [9], [10] ಮತ್ತು [14ಅ]ಗಳನ್ನು ಈ ಕೆಳಕಂಡಂತೆ ಬದಲಾಯಿಸಿ ಆದೇಶ ಹೊರಡಿಸಲಾಗಿದೆ.

**1) ಮಾರ್ಗಸೂಚಿ (9):**

ಸಹಕಾರ ಸಂಘಗಳಲ್ಲಿ ಸದಸ್ಯರಿರುವ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಸದಸ್ಯರು ವಾರ್ಷಿಕ ವಂತಿಗೆ ರೂ.50/–ನ್ನು ಪಾವತಿಸಿ, 2014–15ನೇ ಸಾಲಿನಲ್ಲೂ ಸಹ ಸದಸ್ಯರಾಗಬಹುದು ಹಾಗೂ ನವೀಕರಿಸಿಕೊಳ್ಳಬಹುದು. ಈ ಪೈಕಿ ರೂ.10/– ಅನ್ನು ಸಂಘದ ಸಾದಿಲ್ವಾರು ವೆಚ್ಚಕ್ಕೆ ಮತ್ತು ಯಶಸ್ವಿನಿ ಸದಸ್ಯರುಗಳನ್ನು ನೋಂದಾಯಿಸಲು ಶ್ರಮಿಸಿದವರಿಗೆ ಪ್ರೋತ್ಸಾಹಧನವಾಗಿ ಸಹಕಾರ ಸಂಘ/ಸಂಸ್ಥೆಯು ಇಟ್ಟುಕೊಂಡು, ಉಳಿದ ರೂ.40/–ಗಳನ್ನು ಯಶಸ್ವಿನಿ ಟ್ರಸ್ಟ್‌ಗೆ ಪಾವತಿಸಬೇಕು. ಉಳಿದ ರೂ.200/–ಗಳ ವಂತಿಗೆಯನ್ನು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಸದಸ್ಯರಿಗೆ ಸರ್ಕಾರದ ವತಿಯಿಂದಲೇ ಭರಿಸಲಾಗುವುದು.

**2) ಮಾರ್ಗಸೂಚಿ(10):**

ಯಶಸ್ವಿನಿ ಸದಸ್ಯರಾಗಲು ನಿಗದಿಗೊಳಿಸಿದ ಗರಿಷ್ಠ ವಯೋಮಿತಿ 75 ವರ್ಷದ ಮಿತಿಯನ್ನು ತೆಗೆದುಹಾಕಲಾಗಿದೆ. ಯೋಜನೆಯಡಿಯಲ್ಲಿ ನವಜಾತ ಶಿಶುವಿನಿಂದ ಹಿಡಿದು ಜೀವಿತಾವಧಿಯವರೆಗೆ ಯೋಜನೆಯ ಸೌಲಭ್ಯವನ್ನು ಪಡೆಯಲು ಯಶಸ್ವಿನಿ ಸದಸ್ಯರು ಅರ್ಹರಿರುತ್ತಾರೆ.

**3) ಮಾರ್ಗಸೂಚಿ(14)(ಅ):**

ಯಶಸ್ವಿನಿ ಸದಸ್ಯರುಗಳನ್ನು ನೋಂದಾಯಿಸುವ/ ನವೀಕರಿಸುವ **ಕೊನೆಯ ದಿನಾಂಕ:15.07.2014**

**ಲಿಜ್ಜಿ ಫಿಲಿಫ್ಸ್**
ವಿಶೇಷ ಕರ್ತವ್ಯಾಧಿಕಾರಿ ಮತ್ತು ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ
ಸಹಕಾರ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ



| ಭಾಗ – I | ಬೆಂಗಳೂರು, ಶನಿವಾರ, ಮೇ ೩೧, ೨೦೧೪ (ಜ್ಯೇಷ್ಠ ೧೦, ಶಕ ವರ್ಷ ೧೯೩೬) | ನಂ. ೩೪೭ |
|---|---|---|
| **Part – I** | **Bangalore, Saturday, May 31, 2014 (Jyeishta 10, Shaka Varsha 1936)** | **No. 347** |



## ಸಹಕಾರ ಸಚಿವಾಲಯ

**ವಿಷಯ :** 2014–15ನೇ ಸಾಲಿನಿಂದ **ಯಶಸ್ವಿನಿ ನಗರ ಸಹಕಾರಿಗಳ ಆರೋಗ್ಯ ರಕ್ಷಣಾ ಯೋಜನೆ**ಯನ್ನು ಜಾರಿಗೊಳಿಸಲು ಹಾಗೂ ಸದಸ್ಯರುಗಳನ್ನು ನೋಂದಾಯಿಸಲು ಮಾರ್ಗ ಸೂಚಿಗಳನ್ನು ಬದಲಾಯಿಸಿ (Substitute) ಆದೇಶ ಹೊರಡಿಸುವ ಬಗ್ಗೆ.

**ಉಲ್ಲೇಖ :** (1) ಈ ಕಛೇರಿ ಸಮಸಂಖ್ಯೆ ಸರ್ಕಾರಿ ಆದೇಶ ದಿನಾಂಕ: 26.02.2014

**ಪ್ರಸ್ತಾವನೆ:**

ದಿನಾಂಕ: 27.05.2014ರಂದು ನಗರ ಯಶಸ್ವಿನಿ ಯೋಜನೆಯ ಉಧ್ಘಾಟನಾ ಸಮಾರಂಭದಂದು ಮಾನ್ಯ ಮುಖ್ಯಮಂತ್ರಿಯವರನ್ನು ವಿವಿಧ ಸಹಕಾರ ಸಂಘಗಳ ಸದಸ್ಯರುಗಳು ಮನವಿ ಮಾಡಿಕೊಂಡು ಉಲ್ಲೇಖ (1) ರಲ್ಲಿ ವಾರ್ಷಿಕ ವಂತಿಗೆ ರೂ. 1010/–ನ್ನು ಕಡಿಮೆ ಮಾಡಬೇಕೆಂದು ಹಾಗೂ ಸಹಕಾರಿ ಸಂಘಗಳ ಹಿರಿಯ ಸದಸ್ಯರುಗಳು ಉಲ್ಲೇಖ (1)ರ ಆದೇಶದಲ್ಲಿ ನಿಗದಿಪಡಿಸಿರುವ 75 ವರ್ಷಗಳ ವಯೋಮಿತಿಯನ್ನು ಸಡಿಲಿಸಬೇಕೆಂದು ಮನವಿ ಮಾಡಿಕೊಂಡ ಮೇರೆಗೆ ಮಾನ್ಯ ಮುಖ್ಯಮಂತ್ರಿಯವರು ನಗರ ಯಶಸ್ವಿನಿ ಯೋಜನೆಯಡಿ (1) ವಾರ್ಷಿಕ ವಂತಿಗೆಯನ್ನು ರೂ.710/–ಕ್ಕೆ ನಿಗದಿಪಡಿಸಲು ಮತ್ತು (2) 75 ವರ್ಷಗಳ ವಯೋಮಿತಿಯನ್ನು ಸಡಿಲಿಸಿ ಜೀವಿತಾವಧಿಯವರೆಗೆ ಪ್ರಯೋಜನ ಸಿಗುವಂತೆ ಮಾಡಲು ಆದೇಶಿಸಿದ ಹಿನ್ನೆಲೆಯಲ್ಲಿ ಮಾರ್ಗಸೂಚಿ 7,8,9,10 ನ್ನು ಬದಲಾಯಿಸುವ ಅವಶ್ಯಕತೆಯಿರುತ್ತದೆ. ಲೋಕ ಸಭಾ ಚುನಾವಣೆಯ ನೀತಿ ಸಂಹಿತೆಯ ಕಾರಣದಿಂದ ನಗರ ಯಶಸ್ವಿನಿ ಯೋಜನೆಯಡಿ ನೋಂದಾವಣೆಯ ಕಾರ್ಯಕ್ರಮವನ್ನು ಸ್ಥಗಿತಗೊಳಿಸಲಾಗಿತ್ತು. ಲೋಕಸಭಾ ಚುನಾವಣೆ ನಂತರ ನೋಂದಾವಣೆಯ ಕಾರ್ಯಕ್ರಮವನ್ನು ಆರಂಭಿಸಿರುವ ಕಾರಣ ಸದಸ್ಯರ ನೋಂದಾವಣೆಯ ಪ್ರಗತಿಯಲ್ಲಿ ಕಡಿಮೆ ಇರುವುದರಿಂದ ಹೆಚ್ಚಿನ ಪ್ರಗತಿ ಸಾಧಿಸಲು ಅನುವಾಗುವಂತೆ 13 (ಅ) ನ್ನು ಸಹ ಬದಲಾಯಿಸುವ (Substitute) ಅಗತ್ಯತೆ ಇರುವುದರಿಂದ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಒ/119/ಸಿಎಲ್ಎಸ್/2014, ಬೆಂಗಳೂರು ದಿನಾಂಕ: 30.05.2014**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನಲೆಯಲ್ಲಿ ಯಶಸ್ವಿನಿ ನಗರ ಸಹಕಾರಿಗಳ ಆರೋಗ್ಯ ರಕ್ಷಣಾ ಯೋಜನೆಯಡಿಯಲ್ಲಿ ಹೊರಡಿಸಿರುವ ಸರ್ಕಾರದ ಆದೇಶದಲ್ಲಿನ ಮಾರ್ಗಸೂಚಿ ಸಂಖ್ಯೆ 8,9,10 ಮತ್ತು 13(ಅ) ಗಳಲ್ಲಿ ಈ ಕೆಳಕಂಡಂತೆ ಬದಲಾಯಿಸಿ ಆದೇಶ ಹೊರಡಿಸಲಾಗಿದೆ.

**1) ಮಾರ್ಗಸೂಚಿ(7):**

2014–15ನೇ ಸಾಲಿಗೆ ಯಶಸ್ವಿನಿ ವಾರ್ಷಿಕ ವಂತಿಗೆಯನ್ನು ಪ್ರತಿಯೊಬ್ಬರಿಗೆ ರೂ.710/–ಕ್ಕೆ ನಿಗದಿಗೊಳಿಸಲಾಗಿದೆ. ಈ ಯೋಜನೆಯ ಪ್ರಯೋಜನ ಪಡೆಯಲು ಉದ್ದೇಶಿಸುವ ಪ್ರತಿಯೊಬ್ಬರು ರೂ.710/– ರಂತೆ ಪ್ರಧಾನ ಅರ್ಜಿದಾರರು ಮತ್ತು ಅವರ ಕುಟುಂಬದ ಉದ್ದೇಶಿಸಿದ ಪ್ರತಿಯೊಬ್ಬ ಸದಸ್ಯರಿಗೆ

ಕಡ್ಡಾಯವಾಗಿ ಪಾವತಿ ಮಾಡಬೇಕು. ಈ ಪೈಕಿ ರೂ.10/– ಅನ್ನು ಸಂಘದ ಸಾದಿಲ್ವಾರು ವೆಚ್ಚಕ್ಕೆ ಮತ್ತು ಯಶಸ್ವಿನಿ ಸದಸ್ಯರುಗಳನ್ನು ನೋಂದಾಯಿಸಲು ಶ್ರಮಿಸಿದವರಿಗೆ ಪ್ರೋತ್ಸಾಹಧನವಾಗಿ ಸಹಕಾರ ಸಂಘ/ಸಂಸ್ಥೆಯು ಇಟ್ಟುಕೊಂಡು, ಉಳಿದ ರೂ.700/–ಗಳನ್ನು ಹಣ ಸ್ವೀಕರಿಸಿದ 15 ದಿನಗಳೊಳಗಾಗಿ ಸಂಬಂಧಿಸಿದ ಜಿಲ್ಲಾ ಸಹಕಾರಿ ಬ್ಯಾಂಕುಗಳಲ್ಲಿ ಯಶಸ್ವಿನಿ ಟ್ರಸ್ಟ್ ಹೊಂದಿರುವ ನಗರ ಯಶಸ್ವಿನಿ ಖಾತೆಗೆ ಜಮಾ ಮಾಡಬೇಕು/ವರ್ಗಾಯಿಸಬೇಕು. ವಿಳಂಬವಾದಲ್ಲಿ ಆ ಹಣವನ್ನು ಇಟ್ಟುಕೊಂಡ ಸಹಕಾರಿ ಸಂಘ/ಸಂಸ್ಥೆಯವರು ಬ್ಯಾಂಕಿನ ನಿಯಮಗಳ ಪ್ರಕಾರ ವಿಳಂಬದ ಅವಧಿಗೆ ಬಡ್ಡಿ ಪಾವತಿ ಮಾಡಲು ಬದ್ಧರಾಗುತ್ತಾರೆ. ಈಗಾಗಲೇ ರೂ.1010/–ಗಳನ್ನು ವಾರ್ಷಿಕ ವಂತಿಗೆಯಾಗಿ ಪಾವತಿಸಿರುವ ಸದಸ್ಯರಿಗೆ ರೂ. 300/–ನ್ನು 2015–16ನೇ ಸಾಲಿನಲ್ಲಿ ನವೀಕರಣದ ಸಮಯದಲ್ಲಿ ಹೊಂದಾಣಿಕೆ ಮಾಡಿಕೊಳ್ಳತಕ್ಕದ್ದು.

**2) ಮಾರ್ಗಸೂಚಿ:(8):**

ಸಹಕಾರ ಸಂಘಗಳಲ್ಲಿ ಸದಸ್ಯರಿರುವ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ವರ್ಗದ ಸದಸ್ಯರು ಮತ್ತು ಅವರ ಕುಟುಂಬ ವರ್ಗದ ಪ್ರತಿ ಸದಸ್ಯನು ರೂ.510/–ನ್ನು ವಂತಿಗೆಯಾಗಿ ಪಾವತಿಸಿ ನಗರ ಸಹಕಾರಿಗಳ ಆರೋಗ್ಯ ರಕ್ಷಣಾ ಯೋಜನೆಯಲ್ಲಿ ಸದಸ್ಯರಾಗಬಹುದು. ಈ ಪೈಕಿ ರೂ.10/– ಅನ್ನು ಸಂಘದ ಸಾದಿಲ್ವಾರು ವೆಚ್ಚಕ್ಕೆ ಮತ್ತು ಯಶಸ್ವಿನಿ ಸದಸ್ಯರುಗಳನ್ನು ನೋಂದಾಯಿಸಲು ಶ್ರಮಿಸಿದವರಿಗೆ ಪ್ರೋತ್ಸಾಹಧನವಾಗಿ ಸಹಕಾರ ಸಂಘ/ಸಂಸ್ಥೆಯು ಇಟ್ಟುಕೊಂಡು, ಉಳಿದ ರೂ.500/–ಗಳನ್ನು ಯಶಸ್ವಿನಿ ಟ್ರಸ್ಟ್‌ಗೆ ಪಾವತಿಸಬೇಕು. ರೂ.200/–ಗಳ ವಂತಿಗೆಯನ್ನು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಸದಸ್ಯರಿಗೆ ಸರ್ಕಾರದ ವತಿಯಿಂದಲೇ ಭರಿಸಲಾಗುವುದು.

3) **ಮಾರ್ಗಸೂಚಿ:(9):**

2014–15ನೇ ಸಾಲಿಗೆ ಯಾವುದೇ ಒಂದು ಕುಟುಂಬದಲ್ಲಿ ಐವರು ಅಥವಾ ಅದಕ್ಕಿಂತ ಹೆಚ್ಚಿಗೆ ಕುಟುಂಬ ಸದಸ್ಯರನ್ನು ಯಶಸ್ವಿನಿ ಸದಸ್ಯರನ್ನಾಗಿ ನೋಂದಾಯಿಸಿದಲ್ಲಿ ಅವರು ಪಾವತಿಸಬೇಕಾದ ವಂತಿಗೆ ಹಣದಲ್ಲಿ ಅಂದರೆ ಪ್ರತಿ ಸದಸ್ಯರಿಗೆ ರೂ.700/–ರಲ್ಲಿ ಶೇ.15 ರಂತೆ ರಿಯಾಯಿತಿ ಪಡೆಯಲು ಅರ್ಹರಿರುತ್ತಾರೆ.

4) **ಮಾರ್ಗಸೂಚಿ:(10):**

ಯಶಸ್ವಿನಿ ಸದಸ್ಯರಾಗಲು ನಿಗದಿಗೊಳಿಸಿದ ಗರಿಷ್ಠ ವಯೋಮಿತಿ 75 ವರ್ಷದ ಮಿತಿಯನ್ನು ತೆಗೆದುಹಾಕಲಾಗಿದೆ. ಯೋಜನೆಯಡಿಯಲ್ಲಿ ನವಜಾತ ಶಿಶುವಿನಿಂದ ಹಿಡಿದು ಜೀವಿತಾವಧಿಯವರೆಗೆ ಯೋಜನೆಯ ಸೌಲಭ್ಯವನ್ನು ಪಡೆಯಲು ಅರ್ಹರಾಗಿರುತ್ತಾರೆ.

5) **ಮಾರ್ಗಸೂಚಿ:(13) (ಅ):**

ಯಶಸ್ವಿನಿ ಸದಸ್ಯರುಗಳನ್ನು ನೋಂದಾಯಿಸುವ **ಕೊನೆಯ ದಿನಾಂಕ: 15.07.2014.**

**ಲಿಜಿ ಫಿಲಿಫ್ಸ್**
ವಿಶೇಷ ಕರ್ತವ್ಯಾಧಿಕಾರಿ ಮತ್ತು ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ
ಸಹಕಾರ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ

| ಭಾಗ – I<br>Part – I | ಬೆಂಗಳೂರು, ಶನಿವಾರ, ಮೇ ೩೧, ೨೦೧೪ (ಜ್ಯೇಷ್ಠ ೧೦, ಶಕ ವರ್ಷ ೧೯೩೬)<br>Bangalore, Saturday, May 31, 2014 (Jyeishta 10, Shaka Varsha 1936) | ನಂ. ೩೪೮<br>No. 348 |
|---|---|---|

## ಅಲ್ಪಸಂಖ್ಯಾತರ ಕಲ್ಯಾಣ, ಹಜ್ ಮತ್ತು ವಕ್ಫ್ ಸಚಿವಾಲಯ

**ವಿಷಯ :** ಕರ್ನಾಟಕ ಉರ್ದು ಅಕಾಡೆಮಿಗೆ ಅಧ್ಯಕ್ಷರು ಹಾಗೂ ಸದಸ್ಯರನ್ನು ನಾಮನಿರ್ದೇಶನ ಮಾಡುವ ಬಗ್ಗೆ.

**ಓದಲಾಗಿದೆ :** ಮಾನ್ಯ ಮುಖ್ಯಮಂತ್ರಿಯವರು ಕಡತ ಸಂಖ್ಯೆ: ಎಂಡಬ್ಲ್ಯೂಡಿ 12 ಕೆಯುಎ 2013 (ಪಿ–2) ರಲ್ಲಿ ಅನುಮೋದಿಸಿರುವ ಪ್ರಸ್ತಾವನೆ ದಿನಾಂಕ: 02.03.2014.

**ಪ್ರಸ್ತಾವನೆ:**

ಮೇಲೆ ಓದಲಾದ ಕಡತದಲ್ಲಿ ಸನ್ಮಾನ್ಯ ಮುಖ್ಯಮಂತ್ರಿಯವರು ಕರ್ನಾಟಕ ಉರ್ದು ಅಕಾಡೆಮಿಗೆ ನೂತನ ಅಧ್ಯಕ್ಷರು ಮತ್ತು ಸದಸ್ಯರನ್ನು ನಾಮ ನಿರ್ದೇಶನ ಮಾಡಿ ಕೂಡಲೇ ಆದೇಶ ಹೊರಡಿಸಲು ಸೂಚಿಸಿರುತ್ತಾರೆ. ಅದರಂತೆ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: MWD 12 KUA 2013 (P-2), ಬೆಂಗಳೂರು, ದಿನಾಂಕ: 31–05–2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಕರ್ನಾಟಕ ಉರ್ದು ಅಕಾಡೆಮಿಗೆ ಈ ಕೆಳಕಂಡ ನೂತನ ಅಧ್ಯಕ್ಷರು ಮತ್ತು ಸದಸ್ಯರುಗಳನ್ನು ನಾಮ ನಿರ್ದೇಶನ ಮಾಡಿ ತಕ್ಷಣದಿಂದ ಜಾರಿಗೆ ಬರುವಂತೆ ಮೂರು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ನೇಮಕ ಮಾಡಿ ಆದೇಶ ಹೊರಡಿಸಿದೆ.

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



| ಕ್ರ. ಸಂ. | | ಹೆಸರು–ವಿಳಾಸ | ಸ್ಥಾನ |
|---|---|---|---|
| ಅ | | **ಡಾ. ಚೌಧರಿ ಫೌಜ್ಜಿಯಾ ಬೇಗಮ್,**<br>#ಸಿ–105, 8ನೇ ಮುಖ್ಯರಸ್ತೆ, 6ನೇ ಕ್ರಾಸ್, ವಸಂತನಗರ, ಬೆಂ–52 | ಅಧ್ಯಕ್ಷರು |
| ಆ | | **ನಿಬಂಧಕರು,** ಕರ್ನಾಟಕ ಉರ್ದು ಅಕಾಡೆಮಿ, ಬೆಂಗಳೂರು. | ಸದಸ್ಯರು |
| ಇ | | **ಅರ್ಥ ಸದಸ್ಯರು (ಸರ್ಕಾರದ ಅಧೀನ ಕಾರ್ಯದರ್ಶಿ, ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ)** ಕರ್ನಾಟಕ ಉರ್ದು ಅಕಾಡೆಮಿ, ಬೆಂಗಳೂರು. | ಸದಸ್ಯರು |
| ಈ | | **ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ನಿರ್ದೇಶಕರು ಅಥವಾ ಅವರ ಪ್ರತಿನಿಧಿ<br>(ಉಪ ನಿರ್ದೇಶಕರ ಶ್ರೇಣಿಗೆ ಕಡಿಮೆ ಇಲ್ಲದಂತೆ)** | ಸದಸ್ಯರು |
| ಉ | | **ರಾಜ್ಯ ಸರ್ಕಾರದಿಂದ ನಾಮನಿರ್ದೇಶಿತರಾದ 10 ಮಂದಿ ಸದಸ್ಯರುಗಳು** | |
| | 1 | **ಶ್ರೀ ಅನಿಲ್ ಠಕ್ಕರ್,**<br># 38, ಆದರ್ಶ ನಗರ, ಹುಬ್ಬಳ್ಳಿ–580032 | ಸದಸ್ಯರು |
| | 2 | **ಶ್ರೀ ಮೊಹಮ್ಮದ್ ಅಮ್ಜದ್ ಹುಸೇನ್,**<br>SFS-13, ಎಂಐಜಿ 2ನೇ ಕೆಹೆಚ್‌ಬಿ ಕಾಲೋನಿ, ಮಸ್ಜಿದ್–ಎ–ರಹಮಾನ್ ಹತ್ತಿರ, ವಕ್ಕಲಗೇರ, ಗುಲಬರ್ಗಾ–585104. | ಸದಸ್ಯರು |
| | 3 | **ಶ್ರೀ ಮೊಹಮ್ಮದ್ ಅಶ್ಫಾಖ್ ಸಿದ್ದಿಖಿ,**<br># 17, ವಿದ್ಯಾಗಿರಿ, ಆಜ್ಞಮ್ ನಗರ, ಬೆಳಗಾವಿ. | ಸದಸ್ಯರು |
| | 4 | **ಶ್ರೀ ನ್ಯಾಮತುಲ್ಲಾ ಖಾನ್,**<br># ಎಂಐಜಿ–12, ಜಹಾನ್–ಎ–ಮಸ್ಸಾರತ್, 1ನೇ ಕ್ರಾಸ್, ಸುಭಾಶ್‌ನಗರ, ಮೈಸೂರು–570007 | ಸದಸ್ಯರು |
| | 5 | **ಪ್ರೊ. ಸಬೀಹಾ ಝುಬೇರ್ ಖಾನ್,**<br>(ಹೆಚ್‌ಓಡಿ–ಉರ್ದು, ಅಬ್ಬಾಸ್ ಖಾನ್ ಕಾಲೇಜ್ ಫಾರ್ ವುಮೆನ್, ಬೆಂಗಳೂರು.) #3–11, 2ನೇ ಮುಖ್ಯರಸ್ತೆ, ಹನುಮಯ್ಯ ಲೇಔಟ್, ಸಂಜಯನಗರ, ಬೆಂಗಳೂರು–94. | ಸದಸ್ಯರು |
| | 6 | **ಶ್ರೀ ಸಯೀದ್ ಯೂಸುಫ್ ಅಲಿ ನಾತಿಖ್,**<br>ಅಲಿಪುರ ಗ್ರಾಮ, ಗೌರಿಬಿದನೂರು ತಾ., ಚಿಕ್ಕಬಳ್ಳಾಪುರ ಜಿಲ್ಲೆ. | ಸದಸ್ಯರು |
| | 7 | **ಶ್ರೀ ಸೈಯದ್ ಶಫೀಕ್ ಅಹಮದ್ (ಶಫೀಖ್ ಆಬಿದಿ),**<br># 165, ವೈಎಸ್‌ಹೆಚ್ ಕಾಂಪ್ಲೆಕ್ಸ್, ಚಿಕ್ಕಬಜ಼ಾರ್ ರಸ್ತೆ, ಶಿವಾಜಿನಗರ ಬಸ್‌ಸ್ಟಾಂಡ್ ಎದುರು, ಬೆಂಗಳೂರು–51. | ಸದಸ್ಯರು |
| | 8 | **ಶ್ರೀ ರಿಜ್ವಾನುಲ್ಲಾ ಖಾನ್,**<br>ಪತ್ರಕರ್ತರು, # 38, 1ನೇ ಮುಖ್ಯರಸ್ತೆ, ಕೆಂಪಯ್ಯ ಬ್ಲಾಕ್,<br>ಜೆ.ಸಿ. ನಗರ, ಬೆಂಗಳೂರು–560006. | ಸದಸ್ಯರು |
| | 9 | **ಶ್ರೀ ಭಂಡಾರಿ ರಫೀ ಅಹಮದ್ ಮೊಹಮ್ಮದ್ ಹಾಶೀಮ,**<br>192, ಸಕಾಫ್ ರೋಜಾ, ವಿಜಾಪುರ, | ಸದಸ್ಯರು |
| | 10 | **ಶ್ರೀ ಮುಹಮ್ಮದ್ ಯೂಸುಫ್,**<br>ಪತ್ರಕರ್ತರು, # 5–2–148, 1ನೇ ಹಂತ, ಗೋಲೆ ಖಾನ, ಪಟಾಲ್‌ನಗರಿ, ಬೀದರ್–585401. | ಸದಸ್ಯರು |
| ಊ | | **ಅಕಾಡೆಮಿಯ ಮೊದಲ ಸಭೆಯಲ್ಲಿ ಅಕಾಡೆಮಿಯು ಆಯ್ಕೆ ಮಾಡಿಕೊಂಡ 3 ಮಂದಿ (ಕೋ–ಆಪ್ಟ್) ಸಹ ಸದಸ್ಯರು)** | 3–ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಅಬ್ಬಾಸ್ ಷರೀಫ್**
ಸರ್ಕಾರದ ಅಧೀನ ಕಾರ್ಯದರ್ಶಿ
ಅಲ್ಪಸಂಖ್ಯಾತರ ಕಲ್ಯಾಣ, ಹಜ್ ಮತ್ತು ವಕ್ಫ್ ಇಲಾಖೆ

ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

## ವಿಶೇಷ ರಾಜ್ಯ ಪತ್ರಿಕೆ


| ಭಾಗ – III | ಬೆಂಗಳೂರು, ಶುಕ್ರವಾರ, ಮೇ ೨೩, ೨೦೧೪ (ಜೇಷ್ಠ ೨, ಶಕ ವರ್ಷ ೧೯೩೬) | ನಂ. ೩೨೮ |
|---|---|---|
| Part – III | Bangalore, Friday, May 23, 2014 (Jyeishta 2, Shaka Varsha 1936) | No. 328 |


**ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ**

**ತಿದ್ದುಪಡಿ ಅಧಿಸೂಚನೆ**

**ಸಂಖ್ಯೆ: ಸಿಐ 127 ಎಸ್‌ಪಿಕ್ಯೂ 2013, ಬೆಂಗಳೂರು, ದಿನಾಂಕ: 23.05.2014**

ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆ 1966ರ ಕಲಂ 28(4)ರಡಿ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಐ 186 ಎಸ್‌ಪಿಕ್ಯೂ 2012, ದಿನಾಂಕ: 10.07.2012ರನ್ವಯ ರಾಜ್ಯಪತ್ರದಲ್ಲಿ ಪ್ರಕಟಿತ ದಿನಾಂಕ: 10.07.2012ರಂದು ಕರ್ನಾಟಕ ರಾಜ್ಯ ಪತ್ರ ಭಾಗ–3ರಲ್ಲಿ ಪ್ರಕಟವಾದ ಅಧಿಸೂಚನೆಯಲ್ಲಿ ಹಾಗೂ ಕಲಂ 28(4)ರ ಹೆಚ್ಚುವರಿ ಅಧಿಸೂಚನೆ ಸಂಖ್ಯೆ: ಸಿಐ 237 ಎಸ್‌ಪಿಕ್ಯೂ 2010, ದಿನಾಂಕ: 12.01.2011 ಹಾಗೂ ರಾಜ್ಯಪತ್ರದಲ್ಲಿ ಪ್ರಕಟಿತ ದಿನಾಂಕ: 12.01.2011ರಲ್ಲಿ ಈ ಕೆಳಕಾಣಿಸಿದ ಸರ್ವೆ ನಂಬರ್‌ಗೆ ಸಂಬಂಧಿಸಿದ ಭೂ ಮಾಲೀಕರ ಹೆಸರುಗಳಲ್ಲಿ ಬದಲಾವಣೆ ಆಗಿರುವುದರಿಂದ ಇದನ್ನು ಪ್ರಸ್ತುತ ಅಧಿಸೂಚನೆಯಲ್ಲಿ ಅಳವಡಿಸಿಕೊಂಡು ಓದಿಕೊಳ್ಳುವ ಮೂಲಕ ತಿದ್ದುಪಡಿ ಅಧಿಸೂಚನೆ ಹೊರಡಿಸಲಾಗಿದೆ.

ಗ್ರಾಮ:– ವೇಣಿವೀರಾಪುರ ತಾಲ್ಲೂಕು:– ಬಳ್ಳಾರಿ ಜಿಲ್ಲೆ:– ಬಳ್ಳಾರಿ

| ಕಲಂ 28(4)ರ ಅಧಿಸೂಚನೆಯಲ್ಲಿದ್ದಂತೆ | | | | ತಿದ್ದುಪಡಿಯಾಗಿ ಓದಿಕೊಳ್ಳಬೇಕಾದದ್ದು | | | |
|---|---|---|---|---|---|---|---|
| ಅಧಿಸೂಚನೆ ಕ್ರ, ಸಂ | ಖಾತೆದಾರರ ಹೆಸರು | ಸರ್ವೆ ನಂಬರ್ | ಕ್ಷೇತ್ರ (ಎ–ಗುಂ) | ಕ್ರ ಸಂ. | ಖಾತೆದಾರರ ಹೆಸರು | ಸರ್ವೆ ನಂಬರ್ | ಕ್ಷೇತ್ರ (ಎ–ಗುಂ) |
| | 1. ಹಳ್ಳ (8–00) | 169/ಎ /1/ಎ | 15–00 | 13 | 1. ಹಳ್ಳ (8–00) | 169/ಎ /1/ಎ | 15–00 |
| | 2. ಹರಿ ದುಗ್ಗಪ್ಪ (2–00) | | | | 2. ಹರಿ ದುಗ್ಗಪ್ಪ (2–00) | | |
| | 3. ಹುಲಗಪ್ಪ (2–00) | | | | 3. ಹುಲಗಪ್ಪ (2–00) | | |
| | 4. ಸ್ಮಶಾನ (1–00) | | | | 4. ಸ್ಮಶಾನ (1–00) | | |
| | | | | | 5. ಹರಿ ಹನುಮಂತಪ್ಪ (2–00) | | |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಪಿ. ರಾಮಕೃಷ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ (ಕೈ.ಅ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ

| ಭಾಗ – III | ಬೆಂಗಳೂರು, ಮಂಗಳವಾರ, ಮೇ ೨೭, ೨೦೧೪ (ಜೇಷ್ಠ ೬, ಶಕ ವರ್ಷ ೧೯೩೬) | ನಂ. ೩೩೪ |
|---|---|---|
| Part – III | Bangalore, Tuesday, May 27, 2014 (Jyeishta 6, Shaka Varsha 1936) | No. 334 |


## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಲೋಇ:125:ಸೇಸಕಿ:2014, ಬೆಂಗಳೂರು, ದಿನಾಂಕ: 26–05–2014**

ಲೋಕೋಪಯೋಗಿ ಇಲಾಖೆ ಮತ್ತು ಜಲಸಂಪನ್ಮೂಲ ಇಲಾಖೆಯ ಸಹಾಯಕ ಇಂಜಿನಿಯರ್‌ಗಳ ವೃಂದದ ಜೇಷ್ಠತಾ ಪಟ್ಟಿಯನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ:ಲೋಇ:98:ಸೇಸಕಿ:08 ದಿನಾಂಕ: 15–11–2010ರಲ್ಲಿ ದಿನಾಂಕ: 1–1–1980 ರಿಂದ 31–12–2004ರವರೆಗೆ ಇದ್ದಂತೆ ಪ್ರಕಟಿಸಲಾಗಿದ್ದು ಸದರಿ ಅಧಿಸೂಚನೆಯು ದಿನಾಂಕ: 22–11–2010ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡಿರುತ್ತದೆ.

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರು ದಿನಾಂಕ: 25–4–2014ರ ಪತ್ರದಲ್ಲಿ ಶ್ರೀ ವಿ.ಶ್ರೀನಿವಾಸ, ಇವರು ಅನುಕಂಪದ ಆದಾರದ ಮೇಲೆ ದಿನಾಂಕ: 20–7–1992ರಂದು ಕಿರಿಯ ಇಂಜಿನಿಯರ್ ಹುದ್ದೆಯ ಕರ್ತವ್ಯಕ್ಕೆ ಸೇರಿದ್ದು ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿರುವ ಅವಕಾಶದಂತೆ ಕಿರಿಯ ಇಂಜಿನಿಯರ್ ವೃಂದದಿಂದ ಸಹಾಯಕ ಇಂಜಿನಿಯರ್ ವೃಂದಕ್ಕೆ ವೃಂದ ಬದಲಾವಣೆ ಹೊಂದಿ ದಿನಾಂಕ: 28–07–1997ರಿಂದ ಸಹಾಯಕ ಇಂಜಿನಿಯರ್ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು ಸಹಾಯಕ ಇಂಜಿನಿಯರ್ ವೃಂದದ ಜೇಷ್ಠತಾ ಪಟ್ಟಿಯಲ್ಲಿ ಇವರ ಹೆಸರು ಸೇರ್ಪಡೆಗೊಳಿಸಿರುವುದಿಲ್ಲವೆಂದು ವರದಿ ಮಾಡಿರುತ್ತಾರೆ. ಮುಂದುವರೆದು ಲೋಕೋಪಯೋಗಿ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮದ ಅನುಸಾರ ಬಿ.ಇ.ಪದವಿ ಪಡೆದ ಕಿರಿಯ ಇಂಜಿನಿಯರ್‌ಗಳು ಸಹಾಯಕ ಇಂಜಿನಿಯರ್ ವೃಂದಕ್ಕೆ ವೃಂದ ಬದಲಾವಣೆ ಹೊಂದಿದಲ್ಲಿ ನಿಯಮಗಳಂತೆ ಅವರುಗಳು ಕಿರಿಯ ಇಂಜಿನಿಯರ್ ಹುದ್ದೆಯಲ್ಲಿ ಸಲ್ಲಿಸಿದ 1/3 ಭಾಗದಷ್ಟು ಸೇವೆಯನ್ನು ಸಹಾಯಕ ಇಂಜಿನಿಯರ್ ಜೇಷ್ಠತೆಯಲ್ಲಿ ಪರಿಗಣಿಸಲು ಅವಕಾಶ ಕಲ್ಪಿಸಿರುವುದರಿಂದ ಸರ್ಕಾರದ ಅಧಿಸೂಚನೆ ಸಂಖ್ಯೆ ಲೋಇ:98:ಸೇಸಕಿ:08 ದಿನಾಂಕ: 15–11–2010ರಲ್ಲಿ ಪ್ರಕಟಿಸಲಾಗಿರುವ ಸಹಾಯಕ ಇಂಜಿನಿಯರ್ ವೃಂದದ ಜೇಷ್ಠತಾ ಪಟ್ಟಿಯಲ್ಲಿ ಸದರಿಯವರ ಜೇಷ್ಠತೆಯನ್ನು ದಿನಾಂಕ: 27–11–95 ರಿಂದ ಪರಿಗಣಿಸಿ ಸೇರ್ಪಡೆ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಲೋಕೋಪಯೋಗಿ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಾವಳಿಯಲ್ಲಿ ಪದವಿ ಹೊಂದಿದ ಕಿರಿಯ ಇಂಜಿನಿಯರ್‌ಗಳು ಸಹಾಯಕ ಇಂಜಿನಿಯರ್ ಹುದ್ದೆಗೆ ವೃಂದ ಬದಲಾವಣೆಯ ಮುಖಾಂತರ ವರ್ಗಾವಣೆಯಾಗಿ ನೇಮಕಗೊಂಡ ತರುವಾಯ ಅವರುಗಳಿಗೆ ಸಹಾಯಕ ಇಂಜಿನಿಯರ್ ಹುದ್ದೆಯಿಂದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ಗಳ ಹುದ್ದೆಯ ಪದೋನ್ನತಿಗೆ ಪರಿಗಣಿಸುವ ಸಂದರ್ಭದಲ್ಲಿ ಅವರುಗಳು ಕಿರಿಯ ಇಂಜಿನಿಯರ್ ಹುದ್ದೆಯಲ್ಲಿ ಸಲ್ಲಿಸಿದ ಸೇವೆಯಲ್ಲಿ 1/3 ಭಾಗ ಗರಿಷ್ಠ 4 ವರ್ಷಗಳ ಸೇವೆಯನ್ನು ಸಹಾಯಕ ಇಂಜಿನಿಯರ್ ವೃಂದಕ್ಕೆ ಪರಿಗಣಿಸಿ ಸಹಾಯಕ ಇಂಜಿನಿಯರ್ ಹುದ್ದೆಯ ಜೇಷ್ಠತೆಯಲ್ಲಿ ಕಾಲ್ಪನಿಕವಾಗಿ ನಿಗಧಿಪಡಿಸಲು ಅವಕಾಶ ಕಲ್ಪಿಸಲಾಗಿದೆ. ಆದ್ದರಿಂದ ಶ್ರೀ ವಿ.ಶ್ರೀನಿವಾಸ್ ಸಹಾಯಕ ಇಂಜಿನಿಯರ್ ಇವರು ಈ ಹಿಂದೆ ಕಿರಿಯ ಇಂಜಿನಿಯರ್ ಹುದ್ದೆಯಲ್ಲಿ ದಿನಾಂಕ 20–7–92 ರಿಂದ 28–7–1997 ರವರೆಗೆ ಸಲ್ಲಿಸಿದ ಸೇವೆಯಲ್ಲಿ 1/3 ಭಾಗದ ಸೇವೆಯನ್ನು ಸಹಾಯಕ ಕಾರ್ಯಪಾಲಕ ಇಂಜಿನಿಯರ್ ವಿಭಾಗ–1 ವೃಂದಕ್ಕೆ ಪದೋನ್ನತಿಗೆ ಪರಿಗಣಿಸುವ ಸಲುವಾಗಿ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮದಲ್ಲಿ ಕಲ್ಪಿಸಿರುವ ಅವಕಾಶದಂತೆ ಸಹಾಯಕ ಇಂಜಿನಿಯರ್ ವೃಂದದ ಜೇಷ್ಠತಾ ಪಟ್ಟಿಯಲ್ಲಿ ದಿನಾಂಕ 27–11–95ಕ್ಕೆ ಕಾಲ್ಪನಿಕವಾಗಿ ಪರಿಗಣಿಸಿ ಅಧಿಸೂಚನೆ ಸಂಖ್ಯೆ ಲೋಇ:98:ಸೇಸಕಿ:08 ದಿನಾಂಕ 15–11–2010ರ ಸಹಾಯಕ ಇಂಜಿನಿಯರ್ ವೃಂದದ ಅಂತಿಮ ಜೇಷ್ಠತಾ ಪಟ್ಟಿಯ ಕ್ರಮ ಸಂಖ್ಯೆ 3468–A ರಲ್ಲಿ ಈ ಕೆಳಕಂಡಂತೆ ನಿಗದಿಪಡಿಸಿ ಸೇರ್ಪಡೆ ಮಾಡಲು ಉದ್ದೇಶಿಸಿದೆ.

| Ranking No | Previous AE. GRD No. | Name of the Engineer | SC/ ST | Date of Birth | Date of En try into service | Date of Regular Appointment to the cadre | Remarks |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 3468-A | - | SRINIVASA V | | 04-04-1965 | 27-07-1992 | 28-07-1997<br>27-11-1995 * | CGA/CC |

* He shall be entitled to count his seniority from the notional date, only for the purpose of consideration for promotion to the post of Assistant Executive Engineer (Division-I).

ಸದರಿ ಅಧಿಸೂಚನೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ 15 ದಿವಸಗಳೊಳಗಾಗಿ ಭಾದಿತರಾಬಹುದಾದ ನೌಕರರು/ಅಧಿಕಾರಿಗಳು ಅವರ ಆಕ್ಷೇಪಣೆ/ ಮನವಿಗಳಿದ್ದಲ್ಲಿ ಸಮರ್ಥನೀಯ ದಾಖಲೆಗಳೊಂದಿಗೆ ಸರ್ಕಾರದ ಕಾರ್ಯದರ್ಶಿಗಳು, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ವಿಕಾಸಸೌಧ, 3ನೇ ಮಹಡಿ, ಬೆಂಗಳೂರು 560001 ಇವರಿಗೆ ಸಲ್ಲಿಸಬಹುದಾಗಿದೆ. ನಿಗದಿತ ಅವಧಿಯ ನಂತರ ಸ್ವೀಕೃತವಾದ ಆಕ್ಷೇಪಣೆ/ಸಲಹೆ/ಮನವಿಗಳನ್ನು ಪರಿಗಣಿಸಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್.ಆರ್. ಮೋಹನ್‌ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ (ಸೇವೆಗಳು–ಬಿ)

